

ಕರ್ನಾಟಕ ಸರ್ಕಾರ

ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ಸಾಹಿತ್ಯ ಸರಣಿ

ಪ್ರಧಾನ ಸಂಪಾದಕರು : ಹೊರಪೇಟೆ ಮಲ್ಲೇಶಪ್ಪ

# ಸಂತಕವಿ ಕನಕದಾಸರ
# ನಳದಮಯಂತಿ ಪ್ರೇಮ ಕಥೆ



- ಡಾ. ಜಿ. ಕೃಷ್ಣಪ್ಪ

ನೆಲೆ ಅಭಿವೃದ್ಧಿ ಪ್ರಾಧಿಕಾರ




# ಸಂತಕವಿ ಕನಕದಾಸರ ನಳದಮಯಂತಿ ಪ್ರೇಮಕತೆ

ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ಸಾಹಿತ್ಯ ಸರಣಿ

ಪ್ರಧಾನ ಸಂಪಾದಕರು

**ಹೊರಪೇಟೆ ಮಲ್ಲೇಶಪ್ಪ**

ಕೆ.ಇ.ಎಸ್.

ಲೇಖಕರು

**ಡಾ. ಜಿ. ಕೃಷ್ಣಪ್ಪ**

**ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ**

ಕಾಗಿನೆಲೆ, ಹಾವೇರಿ ಜಿಲ್ಲೆ

**SANTAKAVI KANAKADASARA NALADAMAYANTI PREMAKATHE**
by Dr. G. Krishnappa
**Published by**
Commissioner,
Kaginele Development Authority,
Kaginele, Haveri Dt., Haveri - 581 110
on behalf of Government of Karnataka

First Print : 2017

Pages : xii + 90 = 102

Price : Rs. 60/-

ISBN : 978-81-932218-2-2

Paper used : 70 Gsm Maplitho. Size: Demy 1/8

Cover Page by : Srikanth Hegde

DTP by : Sathyakumari

**ಸಂತಕವಿ ಕನಕದಾಸರ ನಳದಮಯಂತಿ ಪ್ರೇಮಕತೆ**
ಲೇಖಕರು : ಡಾ. ಜಿ. ಕೃಷ್ಣಪ್ಪ

ಪ್ರಥಮ ಮುದ್ರಣ : 2017

ಪುಟಗಳು : xii + 90 = 102

ಬೆಲೆ : ರೂ. 60/-



ಈ ಆವೃತ್ತಿಯ ಪ್ರಕಾಶಕರು : ಆಯುಕ್ತರು ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ
ಹಾವೇರಿ ಜಿಲ್ಲೆ, ದೂರವಾಣಿ : 08375-289388

ಕಾಗದ : 70ಜಿ.ಎಸ್.ಎಂ. ಮ್ಯಾಪ್ಲಿತೋ. ಅಳತೆ ಡಮ್ಮಿ 1/8

ಮುಖಪುಟ : ಶ್ರೀಕಾಂತ ಹೆಗಡೆ

ಅಕ್ಷರ ಜೋಡಣೆ : ಸತ್ಯಕುಮಾರಿ

ಮುದ್ರಣ :
**ಪದ್ಮಶ್ರೀ ಪ್ರಿಂಟರ್ಸ್**
# 123, 1ನೇ 'ಕೆ' ಬ್ಲಾಕ್, ರಾಜಾಜಿನಗರ,
ಬೆಂಗಳೂರು - 560 010
ಮೊಬೈಲ್ : 98800 83321

# ಅರ್ಪಣೆ

ಸಾಹಿತ್ಯ ಸಂಸ್ಕೃತಿ ಪೋಷಕರಾದ

**ಶ್ರೀ ಎಂ. ನರಸಿಂಹ**

ಸ್ಥಾಪಕ ಕಾರ್ಯದರ್ಶಿ

ಮತ್ತು

**ಶ್ರೀ ಎನ್. ಸೂರ್ಯನಾರಾಯಣ**

ಪ್ರಥಮ ಅಧ್ಯಕ್ಷ

ಉದಯಭಾನು ಕಲಾಸಂಘ, ಬೆಂಗಳೂರು

ಅವರಿಗೆ.

# ನುಡಿತೋರಣ

ಕನ್ನಡ ಹರಿದಾಸ ಪರಂಪರೆಯಲ್ಲಿ ಕನಕದಾಸರ ಹೆಸರು ಬಹುವಿಶಿಷ್ಟವಾದುದು. 'ಕನಕ' ಎಂಬ ಪದವನ್ನು ಯಾವಕಡೆಯಿಂದ ಓದಿದರೂ ಅದು ಕನಕ ಎಂದೇ ಅರ್ಥವನ್ನು ಕೊಡುತ್ತದೆ. ಹಾಗೇ ಕನಕದಾಸರು ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಸ್ಥಿರತೆಯನ್ನು ಹೊಂದಿದವರು. ಅದು ಅವರ ಸಾಹಿತ್ಯದಲ್ಲಿರುವ ಸತ್ವವನ್ನು ಎತ್ತಿತೋರಿಸುತ್ತದೆ.

ಅವರ ಸಾಹಿತ್ಯದಲ್ಲಿನ ವಿಚಾರಧಾರೆಗಳು ಆಧ್ಯಾತ್ಮ, ವೈಚಾರಿಕ, ಸಾಮಾಜಿಕ ಕಳಕಳಿಯನ್ನು ಹೊಂದಿರುವಂತವು. ಅವರ ಸಾಹಿತ್ಯ ಕುರಿತು ಹಿಂದೆಯೇ ಹಲವು ಚರ್ಚೆಗಳು ನಡೆಯಬೇಕಾಗಿತ್ತು. ಆದರೆ ಹಲವು ಅಡೆತಡೆಗಳಿಂದ ವಿಳಂಬವಾಗಿಯಾದರೂ ಹಲವು ಆಯಾಮಗಳಲ್ಲಿ ಚರ್ಚೆಯಾಗುತ್ತಿರುವುದು ಸಂತೋಷತಂದಿದೆ.

ಕನಕದಾಸರು ಯಾವುದೇಒಂದು ಜಾತಿ, ಮತ, ಪಂಥ ಪ್ರದೇಶಕ್ಕೆ ಸೀಮಿತವಾದವರಲ್ಲ. ಅವರು ವಿಶ್ವದ ಒಳಿತನ್ನು ಬಯಸಿ ಜೀವಪರ ನಿಲುವು ತಾಳಿ ದಾರ್ಶನಿಕರೆನಿಸಿಕೊಂಡಿದ್ದಾರೆ. ಆದ್ದರಿಂದ ಜಾಗತಿಕ ಮಟ್ಟಕ್ಕೆ ಅವರ ವಿಚಾರಧಾರೆಗಳನ್ನು ಹೊತ್ತೊಯ್ಯಬೇಕಾದ ಅನಿವಾರ್ಯತೆ ಇದೆ. ಆ ಹಿನ್ನೆಲೆಯಲ್ಲಿ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರಾದ ಶ್ರೀ ಹೊರಪೇಟೆ ಮಲ್ಲೇಶಪ್ಪನವರು ಪ್ರಾಧಿಕಾರದಿಂದ ಸಾಹಿತ್ಯ ಮತ್ತು ಸಾಂಸ್ಕೃತಿಕವಾಗಿ ಜಂಗಮ–ಸ್ಥಾವರ ಎರಡೂ ನಿಟ್ಟಿನಲ್ಲಿ ಕಾರ್ಯಮಾಡುತ್ತಿರುವುದು ಹೆಮ್ಮೆ ತಂದಿದೆ.

ಕನಕದಾಸರ ಕುರಿತು ಧಾರ್ಮಿಕ, ಸಾಮಾಜಿಕ, ವೈಚಾರಿಕ ಹಾಗೂ ತೌಲನಿಕ ಅಧ್ಯಯನಗಳನ್ನು ನಡೆಸಿ ಮೌಲ್ಯಯುತವಾದ ಕೃತಿಗಳನ್ನು ಪ್ರಕಟಿಸುತ್ತಿರುವುದು ಸಂತೋಷ. ಪ್ರಸ್ತುತ ಕೃತಿಯನ್ನು ರಚಿಸಿದ ಡಾ. ಜಿ.ಕೃಷ್ಣಪ್ಪ ಮತ್ತು ಸೃಜನಶೀಲ, ಕ್ರೀಯಾಶೀಲ ಹಾಗೂ ಸಾಂಸ್ಕೃತಿಕ ಮನೋಭಾವನೆಯ ಆಯುಕ್ತರಾದ ಶ್ರೀ ಹೊರಪೇಟೆ ಮಲ್ಲೇಶಪ್ಪನವರನ್ನು ಹಾಗೂ ಉತ್ಸಾಹಿ ಸಂಶೋಧಕರಾದ ಡಾ.ಜಗನ್ನಾಥ ಆರ್. ಗೇನಣ್ಣವರ ಇವರನ್ನು ಕನಕ ಗುರುಪೀಠ ಅಭಿನಂದಿಸುವುದರೊಂದಿಗೆ ಶುಭ ಹಾರೈಸುತ್ತದೆ.

ಶ್ರೀಮದ್ ಜಗದ್ಗುರು ಶ್ರೀ ರೇವಣಸಿದ್ದೇಶ್ವರ ಸಿಂಹಾಸನಾಧೀಶ್ವರ
**ಪ.ಪೂ.ಜಗದ್ಗುರು ಶ್ರೀ ನಿರಂಜನಾನಂದಪುರಿ ಮಹಾಸ್ವಾಮಿಗಳು**
ಶ್ರೀ ಕಾಗಿನೆಲೆ ಮಹಾಸಂಸ್ಥಾನ ಕನಕಗುರು ಪೀಠ
ಶ್ರೀಕ್ಷೇತ್ರ ಕಾಗಿನೆಲೆ

# ಆತ್ಮಯಾವ ಕುಲ ಜೀವಯಾವ ಕುಲ

ಕರ್ನಾಟಕದ ಹರಿದಾಸ ಪರಂಪರೆಯಲ್ಲಿ ಕನಕದಾಸರು ಸಂತ, ಮಹಾಂತ, ಭಕ್ತ, ದಾಸಶ್ರೇಷ್ಠ, ಕಲಿ, ಕವಿ, ವಿಶ್ವಮಾನವ, ದಾರ್ಶನಿಕ ಎಂದೆಲ್ಲ ಜನರ ಮನಸ್ಸಿನಲ್ಲಿ ಒಡಮೂಡಿದ್ದಾರೆ. ಒಬ್ಬ ವ್ಯಕ್ತಿ ಹೀಗೆಲ್ಲ ಆಗಲು ಸಾಧ್ಯವೆ ಎಂಬ ಪ್ರಶ್ನೆ ಬಂದಾಗ ಉತ್ತರಸಿಗುವುದು ಸಾದ್ಯವೇ. ಆದರೆ ಅದು ಕನಕದಾಸರಂತಹ ಮಹಾಮಾನವರಿಗೆ ಮಾತ್ರ ಸಾಧ್ಯ.

ಕುಲ ಕುಲ ಕುಲವೆನ್ನುತಿಹರು
ಕುಲವ್ಯಾವುದುಸತ್ಯ ಸುಖವುಳ್ಳ ಜನರಿಗೆ ॥

ಕೆಸರೊಳು ತಾವರೆ ಪುಟ್ಟಲು ಅದತಂದು
ಬಿಸಜನಾಭನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವ
ವಸುಧೆಯೊಳಗೆ ಭೂಸುರರುಣಲಿಲ್ಲವೆ ॥

ಮೃಗಗಳ ಮೈಯಲಿ ಪುಟ್ಟಿದಕತ್ತುರಿಯ
ತೆಗೆದು ಪೂಸುವರು ದ್ವಿಜರೆಲ್ಲರು
ಒಗೆಯಿಂದ ನಾರಾಯಣನ್ಯಾವ ಕುಲ
ಅಗಜವಲ್ಲಭನ್ಯಾತರ ಕುಲದವನು ॥

ಆತ್ಮಯಾವ ಕುಲ ಜೀವಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮ ನೆಲೆಯಾದಿಕೇಶವನು
ಆತನೊಲಿದ ಮೇಲೆ ಯಾತರ ಕುಲವಯ್ಯ ॥

ಪ್ರಸ್ತುತ ಕೀರ್ತನೆಯ ಒಳಾರ್ಥವನ್ನು ವಿಸ್ತರಿಸಿದರೆ ಅದಕ್ಕಾಗಿ ಒಂದು ಕೃತಿಯನ್ನೆ ರಚಿಸಬಹುದಾಗಿದೆ. ಮೃಗಗಳ ದೇಹದಿಂದ ತೆಗೆದ ಕಸ್ತೂರಿಯನ್ನು ಹಚ್ಚುವವರೆಲ್ಲ

ನಾವು ಶ್ರೇಷ್ಠರೆನ್ನುವರು. ಆದರೆ ಆ ಮೃಗದ ಪರಿಸ್ಥಿತಿಯನ್ನು ಅರಿಯಲಿಲ್ಲ. ಅಲ್ಲದೇ ಅದೂ ಕೂಡಾ ಒಂದು ರೀತಿಯ ಹಿಂಸೆ ಎನ್ನುವುದನ್ನೆ ಮರೆತವರು. ಕನಕದಾಸರ ಒಂದೊಂದು ಕೀರ್ತನೆಯನ್ನು ಹಲವು ನೆಲೆಗಳಲ್ಲಿ ವಿಶ್ಲೇಷಣೆಯನ್ನು ಮಾಡಬಹುದು. ಜಾತಿಯತೆಯನ್ನು ತೊಲಗಿಸಲು ಅವರು ಬಳಸಿದ "ಆತ್ಮಯಾವ ಕುಲ ಜೀವಯಾವ ಕುಲ" ಎಂಬುದು ದಿವ್ಯ ಸೂತ್ರವಾಗಿದೆ. ಕನಕದಾಸರು ಕಲ್ಪಿಸಿಕೊಂಡು ಕಾಣಬಯಸಿದ ಸಮಾಜ ಪ್ಲೇಟೋನ ಆದರ್ಶ ರಾಜ್ಯಕ್ಕೂ ಮಿಗಿಲಾದುದು. ಆ ಹಿನ್ನೆಲೆಯಲ್ಲಿ ಅವರು ಚಿಂತನೆಗಳನ್ನು ನೀಡಿದ್ದು ಕೂಡಾ ಅಪಾರ, ಅನನ್ಯ.

ಕನಕದಾಸರದು ಬಹುಮುಖ ಪ್ರತಿಭೆ. ಹಾಗೇಯೇ ಬಹುಮುಖ ವಿಚಾರಗಳು. ಯಾವಾಗಲೂ ಚಲನ ಶೀಲವಾದವುಗಳು. ಕನ್ನಡ ಸಾಹಿತ್ಯದಲ್ಲಿ ಪ್ರಮುಖವಾಗಿ ಎರಡು ಚಳುವಳಿಗಳು. ಒಂದು ಹನ್ನೆರಡನೇ ಶತಮಾನದ ಶಿವದಾಸರ ಚಳುವಳಿಯಾದರೆ, ಇನ್ನೊಂದು ಹದಿನಾರನೇ ಶತಮಾನದ ಹರಿದಾಸರ ಚಳುವಳಿ. ಈ ಎರಡು ಚಳುವಳಿಗಳಲ್ಲಿ ಅಲ್ಲಲ್ಲಿ ಭಿನ್ನತೆಗಳು ಕಂಡು ಬಂದರೂ, ಅವು ಆಯಾ ಕಾಲಘಟ್ಟಕ್ಕೆ ಮಾತ್ರ ಸೀಮಿತವಾದವು. ಶೈವ ಮತ್ತು ವೈಷ್ಣವವೆಂದು ಭಿನ್ನರೂಪ ತಾಳಿದವು. ಶಿವದಾಸರು ಹರಿಯನ್ನು ಸ್ಮರಿಸಲಿಲ್ಲ. ಹರಿದಾಸರು ಶಿವನನ್ನು ಸ್ಮರಿಸಲಿಲ್ಲ. ಅವುಗಳಿಗೆ ಆಯಾ ಕಾಲಘಟ್ಟಗಳ ರಾಜಕೀಯ ಮತ್ತು ಸಾಮಾಜಿಕ ಶಕ್ತಿಗಳು ಪ್ರೇರಣೆಯನ್ನು ನೀಡುತ್ತವೆ.

ಇಂತಹ ಸಂದರ್ಭದಲ್ಲಿ ತನ್ನ ಕಾಲಘಟ್ಟದಲ್ಲಿ ಪ್ರಚಲಿತವಿರುವ ಚಳುವಳಿಯತ್ತ ಹೊರಳುವುದು ಸಹಜ. ಹದಿನಾರನೇ ಶತಮಾನಕ್ಕಾಗಲೇ ಶಿವದಾಸರ ಚಳುವಳಿ ನಿಂತು ಹೋಗಿತ್ತು. ಆ ಸಂದರ್ಭದಲ್ಲಿ ಹರಿದಾಸರ ಚಳುವಳಿಯ ಕಾಲ, ಅಲ್ಲದೆ ವಿಜಯನಗರದ ರಾಜ ಶ್ರೀಕೃಷ್ಣದೇವರಾಯನೂ ವೈಷ್ಣವ ಪರಂಪರೆಯ ಆರಾಧಕನಾಗಿದ್ದ. ಆ ಪರಂಪರೆಯ ಗುರುಗಳಾದ ವ್ಯಾಸರಾಯರು ರಾಜಗುರುಗಳಾಗಿದ್ದರು. ಹೀಗೆ ಅನೇಕ ಕಾರಣಗಳಿಂದ ಶೈವ ಪರಂಪರೆಯ ಕನಕನಾಯಕ (ಕನಕದಾಸ–ಇಲ್ಲಿ ಬಂದಿರುವ 'ನಾಯಕ' ಎಂಬ ಶಬ್ದ ಜಾತಿ ಸೂಚಕವಾಗಿರದೆ, ಆಡಳಿತ ಹಿನ್ನೆಲೆಯಿಂದ ಬಂದಿರುವುದು). ಹರಿದಾಸ ಚಳುವಳಿ ಸೇರುವುದು ಅನಿವಾರ್ಯವಾಗಿತ್ತು.

ಕನಕದಾಸರು ವೈಷ್ಣವ ಪರಂಪರೆ ಸೇರಿ ಹರಿದಾಸರಾದರೂ, ತನ್ನ ಮೂಲ ಶೈವ ಪರಂಪರೆಯನ್ನು ಸಂಪೂರ್ಣವಾಗಿ ತನ್ನಿಂದ ತ್ಯಜಿಸಿಲ್ಲ.

ಶಿವ ಶಿವಶಿವ ಎನ್ನಿರೊ– ಮೂಜಗದವರೆಲ್ಲ
ಶಿವ ಶಿವಶಿವ ಎನ್ನಿರೊ

ಎಂಬ ಕೀರ್ತನೆಯಲ್ಲಿ ಶಿವನ ನಾಮ ಸ್ಮರಣೆಯ ಮಹತ್ವವನ್ನು ಮುಕ್ತ ಮನಸ್ಸಿನಿಂದ ಸ್ಮರಿಸಿದ್ದಾರೆ. ಇನ್ನೊಂದು ಕೀರ್ತನೆಯಲ್ಲಿ

ಶಿವ ಮಹಾದೇವನು, ಧರೆಗೆ ಹರಿಯೆದೈವ
ಭುವನಕ್ಕೆ ಹರಿಹರರೇಕಸ್ಥರು ॥

ಎಂದು ಹೇಳಿದ್ದಾರೆ. ಆದ್ದರಿಂದ ಕನಕದಾಸರು ಆ ಎರಡು ಚಳುವಳಿಗಳಲ್ಲಿ ಭಿನ್ನರಾಗಿ ಕಂಡುಬರುತ್ತಾರೆ. ಕಾರಣ ಯಾವುದೇ ಒಂದು ಜಾತಿ, ಮತ, ಪಂಥಕ್ಕೆ ಸೀಮಿತರಾದವರಲ್ಲ. ಕನಕದಾಸರು ಯಾವ ಕಾಲಕ್ಕಾದರೂ ಪ್ರಸ್ತುತರಾಗುತ್ತಾರೆ.

ಪ್ರಸ್ತುತಕನಕದಾಸರ ನಳಚರಿತ್ರೆ ಬಹು ಜನಪ್ರಿಯಗೊಂಡಕೃತಿ. ಕನಕದಾಸರ ಪೂರ್ವದಲ್ಲಿ ನಳೋಪಖ್ಯಾನ ಮತ್ತು ನಳಚಂಪೂ ಕೃತಿಗಳಿದ್ದರೂ ಕನಕದಾಸರು ಈ ಕೃತಿಯನ್ನು ರಚಿಸಿದರು. ಪ್ರಸ್ತುತ ಕೃತಿಯನ್ನು ರಚಿಸುವ ಸಂದರ್ಭದಲ್ಲಿ ಕನಕದಾಸರು ಪ್ರಜ್ಞಾಪೂರ್ವಕವಾಗಿ ಕನ್ನಡ ನಾಡಿನ ಸಾಂಸ್ಕೃತಿಕ ನೆಲೆಗಟ್ಟಿನ ಆಧಾರದಲ್ಲಿ ಕೃತಿರಚನೆ ಮಾಡಿರುವುದು ವಿಶೇಷ. ಅದು ಹೆಸರಿಗೆ ಮಾತ್ರ ನಳಚರಿತ್ರೆ ಅದರಲ್ಲಿ ನಳನಷ್ಟೆ ಸಮಸಮಕ್ಕೆ ದಮಯಂತಿ ಪಾತ್ರವನ್ನುಚಿತ್ರಿಸುತ್ತಾರೆ. ದಮಯಂತಿ ಪತಿವೃತಾಧರ್ಮದ ಹಿನ್ನೆಲೆಯಲ್ಲಿ ಮಾತನಾಡುವಾಗ, ಅವಳು ತೊಡುವ ಆಭರಣಗಳು ಎಲ್ಲವೂ ಕೂಡ ಈ ಮಣ್ಣಿನ ಸೊಗಡನ್ನು ಎತ್ತಿತೋರಿಸುತ್ತವೆ. ಹೀಗಾಗಿ ಕನಕದಾಸರ ನಳಚರಿತ್ರೆಯು ನಳಚಂಪು ಮತ್ತು ನಳೋಪಖ್ಯಾನ ಕೃತಿಗಳಿಂತ ಹೆಚ್ಚು ಜನಪ್ರಿಯಗೊಂಡಿದೆ.

ನಾಡಿನ ಹಿರಿಯ ವಿದ್ವಾಂಸರೂ ಹಾಗೂ ಬೇಂದ್ರೆ ಕೃಷ್ಣಪ್ಪ ಎಂದೇ ಪ್ರಸಿದ್ಧಿಯನ್ನು ಪಡೆದಿರುವ ಡಾ.ಜಿ.ಕೃಷ್ಣಪ್ಪನವರು ೨೦೧೬-೧೭ನೇ ಸಾಲಿನಲ್ಲಿ ಸುಧಾ ವಾರ ಪತ್ರಿಕೆಯಲ್ಲಿ "ಸಂತ ಕವಿ ಕನಕದಾಸರ ನಳದಮಯಂತಿ ಪ್ರೇಮಕಥೆ" ಎಂದು ದಾರಾವಾಹಿಯಾಗಿ ಪ್ರಕಟಗೊಳ್ಳುತ್ತಿತ್ತು. ಬಹಳಷ್ಟು ಜನ ಓದುಗರ ಮನಸ್ಸನ್ನು ಗೆದ್ದಿರುವ ಈ ದಾರಾವಾಹಿಯನ್ನು ಪ್ರಾಧಿಕಾರದಿಂದ ಪುಸ್ತಕ ರೂಪದಲ್ಲಿ ಪ್ರಕಟವಾಗಬೇಕೆಂದು ಕೆಲವು ಜನ ಓದುಗರ ಬಯಕೆಯ ಮೇರೆಗೆ ಪ್ರಕಟಿಸಲಾಗುತ್ತಿದೆ. ಇಲ್ಲಿನ ಸರಳ ಭಾಷೆ ಹಾಗೂ ಕಾದಂಬರಿ ರೂಪದ ಬರವಣಿಗೆ ಶೈಲಿ ಗಮನ ಸೆಳೆಯುವಂತದ್ದು. ಈ ಕೃತಿಯನ್ನು ಪ್ರಾಧಿಕಾರದಿಂದ ಪ್ರಕಟಿಸಲು ಅನುಮತಿಯನ್ನು ನೀಡಿದ ಹಿರಿಯರಾದ ಡಾ.ಜಿ.ಕೃಷ್ಣಪ್ಪನವರನ್ನು ಅಭಿನಂದಿಸುತ್ತೇನೆ. ಕೃತಿಗೆ ನುಡಿತೋರಣ ಬರೆದು ಶುಭ ಹಾರೈಸಿದ ಪ.ಪೂ ಜಗದ್ಗುರು ಶ್ರೀಶ್ರೀಶ್ರೀ ನಿರಂಜನಾನಂದಪುರಿ ಮಹಾಸ್ವಾಮಿಗಳು ಇವರಿಗೆ ಪ್ರಣಾಮಗಳು. ನಮ್ಮ ಪ್ರತಿಯೊಂದು ಕೆಲಸಕ್ಕೂ ಮಾರ್ಗದರ್ಶನ ಮಾಡುತ್ತಿರುವ ಪ್ರಾಧಿಕಾರದ ವಿಶೇಷಾಧಿಕಾರಿಗಳಾದ ಶ್ರೀ ತುಷಾರ್‌ಗಿರಿನಾಥ್ ಭಾ.ಆ.ಸೇ ಅವರನ್ನು ನೆನೆಯುದಿರಲಾರೆ.

ಪ್ರಾಧಿಕಾರದ ಸಾಂಸ್ಕೃತಿಕ ಕಾರ್ಯಕ್ರಮ, ಸಂಶೋಧನೆ, ಪುಸ್ತಕ ಮುದ್ರಣ ಹೀಗೆ ಒಂದಿಲ್ಲೊಂದು ಚಟುವಟಿಕೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಕಾರ್ಯ ನಿರ್ವಹಿಸುತ್ತಿರುವ ಸಂಶೋಧಕರಾದ ಡಾ.ಜಗನ್ನಾಥ ಆರ್.ಗೇನಣ್ಣವರ ಅವರನ್ನು ಮುಖಪುಟವನ್ನು ರಚಿಸಿಕೊಟ್ಟ ಶ್ರೀಕಾಂತ ಹೆಗಡೆ, ಒಳಪುಟ ವಿನ್ಯಾಸ ಮಾಡಿದ ಸ್ವಾಮಿ ಬದ್ರಿ ದೊಣ್ಣೆಹಳ್ಳಿ, ಅಂದವಾಗಿ ಮುದ್ರಣ ಮಾಡಿರುವ ಪದ್ಮಶ್ರೀ ಪ್ರಿಂಟರ್ಸ್ ಬೆಂಗಳೂರು ಇವರೆಲ್ಲರ ಸಹಕಾರ ಸ್ಮರಣೀಯವಾದುದು. ಎಂದಿನಂತೆ ಓದುಗರಾದ ತಮ್ಮನ್ನು ನೆನೆಯದಿರಲಾರೆ.

**ಹೊರಪೇಟೆ ಮಲ್ಲೇಶಪ್ಪ**
ಕೆ.ಇ.ಎಸ್.
ಆಯುಕ್ತರು
ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ, ಕಾಗಿನೆಲೆ

# ಲೇಖಕನ ನುಡಿ

ಸಂತ ಕನಕದಾಸರು (೧೬ನೇ ಶ.) ರಚಿಸಿರುವ 'ನಳಚರಿತ್ರೆ' ಖಂಡ ಕಾವ್ಯವು ಭಾಮಿನೀ ಷಟ್ಪದಿಯಲ್ಲಿದೆ. ಈ ಕಥನ ಕಾವ್ಯ ಪ್ರೇಮದ ಮಧುರ ಭಾವವನ್ನು ಕರುಣರಸ ದಲ್ಲಿ ಪ್ರಕಾಶಿಸಿದೆ. ಮಹಾಭಾರತದಲ್ಲಿರುವ ನಳೋಪಾಖ್ಯಾನವನ್ನು ಕನಕದಾಸರು ತಮ್ಮ ಪ್ರತಿಭೆಯಿಂದ – ನಳ ದಮಯಂತಿಯ ಪ್ರೇಮ ಕುಟ್ಮಲವು ಅರಳಿ ಕಂಪು ಬೀರಿ ಸಹೃದಯರ ರಸಾನಂದವಾಗುವಂತೆ ರಚಿಸಿದ್ದಾರೆ.

ಈ ಕಾವ್ಯದಲ್ಲಿ ದಮಯಂತಿಯ ಸೌಂದರ್ಯ, ಪ್ರೇಮ, ತ್ಯಾಗ, ಸಹನೆ, ಪ್ರಾಮಾಣಿಕತೆ ಹೊರಮುಖವಾಗಿ ಗೋಚರಿಸುತ್ತದೆ. ಅವಳು ನಳನನ್ನು ಹುಡುಕಿಸಿ ಬಾಹುಕನೇ ನಳನೆಂದು ತೀರ್ಮಾನಿಸುವಲ್ಲಿ ಅವಳ ಜಾಣ, ಚತುರ, ವಿವೇಚನಾ ನಡೆಗಳು ಸ್ತ್ರೀಯ ವ್ಯಕ್ತಿತ್ವದ ಶ್ರೇಷ್ಠ ಲಕ್ಷಣವಾಗಿವೆ. ಅದು ಅವಳ ಆಂತರ್ಯದ ಒಳಪ್ರಕಾಶದ ಸಿರಿಮುಖ.

ನಮ್ಮ ತಂದೆ ಶ್ರೀ ಎಚ್. ಗಂಗಯ್ಯ ಅವರು 'ಜೈಮಿನಿ ಭಾರತ' ಮತ್ತು 'ನಳಚರಿತ್ರೆ' ಕಾವ್ಯಗಳನ್ನು ಮನೆಯಲ್ಲಿ ಸಂಜೆಹೊತ್ತು ವಾಚಿಸುತ್ತಿದ್ದರು. ಬಾಲ್ಯದಲ್ಲಿ ಅದನ್ನು ಕೇಳಿ ಬೆಳೆದೆ. ನನಗೂ ವಯಸ್ಸಾದಂತೆ ಅವುಗಳನ್ನು ಜನಸಾಮಾನ್ಯರಿಗೆ ತಲುಪಿಸಲು ಸರಳಗನ್ನಡದಲ್ಲಿ ಬರೆದೆ. 'ಜೈಮಿನಿ ಭಾರತ' ಈಗಾಗಲೆ 'ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ' ಎಂದು ೨೦೧೨ರಲ್ಲಿ ಪ್ರಕಟವಾಗಿದೆ. ಈಗ 'ನಳಚರಿತ್ರೆ'ಯು 'ಸಂತ ಕನಕದಾಸರ ನಳದಮಯಂತಿ ಪ್ರೇಮ ಕಥೆ'ಯಾಗಿ ಪ್ರಕಟಗೊಳ್ಳುತ್ತಿದೆ.

ನನ್ನ ಈ ಸಾಹಿತ್ಯ ಅಧ್ಯಯನಕ್ಕೆ ಮಾರ್ಗದರ್ಶನ ಮಾಡುತ್ತಿರುವ ಗುರುಗಳಾದ ಡಾ. ಕೆ. ಅನಂತರಾಮು, ಪ್ರೊ|| ಎಚ್.ಎಸ್. ಹರಿಶಂಕರ ಅವರಿಗೆ ನನ್ನ ನಮನಗಳು. ತುಂಬು ಪ್ರೋತ್ಸಾಹ ನೀಡುತ್ತಿರುವ ಹಳಗನ್ನಡ ಕಾವ್ಯಪ್ರೇಮಿ ಪ್ರೊ|| ಡಿ.ಕೆ. ಶ್ಯಾಮ

ಸುಂದರರಾವ್, ಪ್ರೊ॥ ಎಸ್.ಜಿ. ಸಿದ್ಧರಾಮಯ್ಯ, ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ್, ಪಂಡಿತ ಎಚ್. ಹನುಮಂತರಾಯ, ಶ್ರೀ ಎಂ.ಇ.ಅಹ್ಮದ್‌ಖಾನ್, ಶ್ರೀ ಗುಡಿಹಳ್ಳಿ ನಾಗರಾಜ, ಶ್ರೀ ಜ.ಹೊ. ನಾರಾಯಣ ಸ್ವಾಮಿ, ಶ್ರೀ ರಾಜೇಗೌಡ ಹೊಸಹಳ್ಳಿ, ಶ್ರೀ ಎಂ. ನರಸಿಂಹ, ಶ್ರೀ ಎನ್. ಸೂರ್ಯ ನಾರಾಯಣ, ಶ್ರೀ ಬಿ.ಎಸ್. ಜಯಪ್ರಕಾಶ ನಾರಾಯಣ, ಡಾ. ಟಿ.ಎನ್. ವಾಸುದೇವ ಮೂರ್ತಿ ಅವರನ್ನು ಸದಾ ಸ್ಮರಿಸುತ್ತೇನೆ.

'ಸಂತ ಕನಕದಾಸರ ನಳದಮಯಂತಿ ಪ್ರೇಮಕಥೆ'ಯನ್ನು 'ಸುಧಾ' ವಾರಪತ್ರಿಕೆಯಲ್ಲಿ (೬-೧೨-೨೦೧೬ ರಿಂದ ೨೬-೧-೨೦೧೭ರ ವರೆಗೆ ೮ ವಾರಗಳು) ಪ್ರಕಟಿಸಿದ ಸಂಪಾದಕರಾದ ಶ್ರೀ ಕೆ.ಎನ್. ತಿಲಕ್ ಕುಮಾರ್ ಅವರಿಗೆ ನನ್ನ ವಂದನೆಗಳು. ಶ್ರೀ ಬಿ.ಎಂ. ಹನೀಫ್ ಮತ್ತು 'ಸುಧಾ' ಸಂಪಾದಕ ಮಂಡಲಿಗೆ ನನ್ನ ನಮಸ್ಕಾರಗಳು. 'ಪ್ರಜಾವಾಣಿ' ಸಂಪಾದಕರಾದ ಶ್ರೀ ಕೆ.ಎನ್. ಶಾಂತಕುಮಾರ್, ಕಾರ್ಯನಿರ್ವಾಹಕ ಸಂಪಾದಕ ಡಾ. ಪದ್ಮರಾಜ ದಂಡಾವತಿ ಅವರಿಗೆ ನನ್ನ ಕೃತಜ್ಞತೆಗಳು. ಈ ಕಥೆಗೆ ಸುಧಾದಲ್ಲಿ ಚಿತ್ರಗಳನ್ನು ರಚಿಸಿದ ಶ್ರೀ ರಘುಪತಿ ಶೃಂಗೇರಿ ಅವರಿಗೆ ಮತ್ತು ಈ ಕೃತಿಗೆ ಮುಖಪುಟ ರಚಿಸಿದ ಶ್ರೀ ಸ್ವಾಮಿ ಬದ್ರಿ ಅವರಿಗೆ ನನ್ನ ನಮಸ್ಕಾರಗಳು.

ನನ್ನ ಬೇಂದ್ರೆ ಕಾವ್ಯಾಸಕ್ತಿ ಮತ್ತು ಸಾಹಿತ್ಯ ಅಧ್ಯಯನವನ್ನು ಕಂಡು, ನನ್ನ ಇಪ್ಪತ್ತನೇ ವಯಸ್ಸಿನಿಂದ ಸದಾ ಪ್ರೋತ್ಸಾಹಿಸುತ್ತಿರುವ ನಿಸ್ವಾರ್ಥ ಚೇತನಗಳು – ಬೆಂಗಳೂರಿನ ಉದಯಭಾನು ಕಲಾಸಂಘದ ಸಂಸ್ಥಾಪಕ ಕಾರ್ಯದರ್ಶಿ ಶ್ರೀ ಎಂ. ನರಸಿಂಹ ಮತ್ತು ಪ್ರಥಮ ಅಧ್ಯಕ್ಷ ಶ್ರೀ ಎನ್. ಸೂರ್ಯನಾರಾಯಣ. ಅವರಿಗೆ ಈ ಮಂಗಳ ಕೃತಿಯನ್ನು ಅರ್ಪಿಸಿರುವೆನು. ಇದನ್ನು ಆ ಹಿರಿಯರು ಪ್ರೀತಿಯಿಂದ ಸ್ವೀಕರಿಸಿ ನನ್ನನ್ನು ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ.

ನನ್ನ ಎಲ್ಲ ಸಾಹಿತ್ಯ ಚಟುವಟಿಕೆಗಳಿಗೆ ಸಹಕಾರ ನೀಡುತ್ತಿರುವ ನಮ್ಮ ದ.ರಾ. ಬೇಂದ್ರೆ ಕಾವ್ಯಕೂಟದ ಸದಸ್ಯರಿಗೆ ನನ್ನ ಮನಃಪೂರ್ವಕ ವಂದನೆಗಳು. ನನ್ನ ಸಾಹಿತ್ಯ ಅಧ್ಯಯನಕ್ಕೆ ತುಂಬು ಪ್ರೋತ್ಸಾಹ ನೀಡುತ್ತಿರುವ ನನ್ನ ಪತ್ನಿ, ಮಕ್ಕಳು, ಅಳಿಯಂದಿರು ಮತ್ತು ಸೊಸೆಯನ್ನು ನೆನೆಯುವುದು ನನ್ನ ಕುಟುಂಬ ಸಾಹಿತ್ಯ ಪೋಷಕ ವಾತಾವರಣದ ಆಹ್ಲಾದ.

ಸಂತ ಕನಕದಾಸರ ಈ ಕೃತಿಯನ್ನು ಪ್ರಕಟಿಸಲು ಶ್ರೀ ಹೊರಪೇಟೆ ಮಲ್ಲೇಶಪ್ಪ, ಆಯುಕ್ತರು, ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರದವರು ತುಂಬು ಆಸಕ್ತಿ ವಹಿಸಿದರು. ಇದು ನನಗೊಂದು ಹೆಮ್ಮೆ. ಅವರು ಮತ್ತು ಗೆಳೆಯ ಡಾ. ಜಗನ್ನಾಥ ಆರ್. ಗೇನಣ್ಣವರ್ ಸಂತ ಕನಕದಾಸರ ಕಾವ್ಯ ಸಾಹಿತ್ಯವನ್ನು ಜನಸಾಮಾನ್ಯರಿಗೆ ತಲುಪಿಸಲು ಮಾಡುತ್ತಿರುವ

ಪ್ರಯತ್ನ ದೊಡ್ಡದು, ನಾಡಿಗೆ ಆದರ್ಶಪ್ರಾಯವಾದುದು. ಅವರಿಗೆ ಮತ್ತು ಮುದ್ರಿಸಿದ ಪದ್ಮಶ್ರೀ ಪ್ರಿಂಟರ್ಸ್, ರಾಜಾಜಿನಗರ ಬೆಂಗಳೂರು ಮುದ್ರಣಾಲಯದ ಮಾಲೀಕರಾದ ಶ್ರೀ ಎಸ್.ಮಾದಯ್ಯ ಅವರಿಗೆ ಮತ್ತು ಸಿಬ್ಬಂದಿಗೆ ನನ್ನ ವಂದನೆಗಳು.

ನಾನು ಈ ಮೊದಲು ಸರಳಗದ್ಯದಲ್ಲಿ ರಚಿಸಿದ 'ವಚನ ಜೈಮಿನಿ ಭಾರತ', 'ವಚನ ಗಿರಿಜಾಕಲ್ಯಾಣ', 'ವಚನ ಹರಿಶ್ಚಂದ್ರ ಚಾರಿತ್ರ'ವನ್ನು ಓದಿ ಸವಿದ ಕಾವ್ಯರಸಿಕರು ಮತ್ತು ವಿದ್ವನ್ಮಣಿಗಳು 'ನಳದಮಯಂತಿ ಪ್ರೇಮ ಕಥೆ'ಯನ್ನು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ.

ದಿನಾಂಕ ೧೮-೩-೨೦೧೭ **ಡಾ. ಜಿ. ಕೃಷ್ಣಪ್ಪ**
ಬೆಂಗಳೂರು

# ಪರಿವಿಡಿ

ಮಾರನಾಕಾರದ ನೃಪಾಲಕ ಕ್ರೂರ ರೂಪಾದನು
ಉರುತರದ ಪಾನೀಯ ಶಾಲೆ

೧೧. **ಬಾಹುಕನಾದ ನಳನೃಪ / ೫೫**
ಮುಂಗೈಗಂಕಣಕೆ ಕುಲದೀಪ ಕನ್ನಡಿಯೇಕೆ
ರಾವುತರರಸನಹುದೋ ಭಾಪು ಭಾಪೆಂದುದು ಸಮಸ್ತಜನ

೧೨. **ದಮಯಂತಿಯನ್ನು ಹುಡುಕಿಸಿ ತಂದ ಭೀಮನೃಪ** / ೫೭
ಈ ಬಗೆಗೆ ತಂದುದೆ ವಿಧಿಯು ನಿನ್ನನ್ನು ಹರ ಮಹಾದೇವ
ಸುದೇವನು ಮನದೊಳನುಮಾನಿಸಿದನೀ ಮಾನಿನಿ
ಮಹಾಸತಿಯೆನುತ
ಇದು ಪತಿವ್ರತ ಧರ್ಮವಹುದೀ ಸುದತಿ ತೊರೆದಿಹಳೆಲ್ಲವನು
ಗಂಡನಗಲಿದ ಚಿಂತೆಯಲಿ ಮುಖ ಬಾಡಿ ದೇಹವನು
ದಂಡಿಸಿದಳನ್ನದಲಿ
ನೀರೊಗುವ ಕಣ್ಣೀರಿನಲಿ ಸಂತೈಸಿದಳು ನಿಜಸುತರ

೧೩. **ದಮಯಂತಿಯ ಮರು ಸ್ವಯಂವರಕ್ಕೆ ಸಾರಥಿಯಾದ ನಳನೃಪ** / ೬೩
ದಾನವಾಮರರೊಳಗೆ ಕಾಣೆ ಸಮಾನರನು ನಳನೃಪಗೆ
ಮನವಳುಕಿ ನಸುನಗೆಯಿಂದ ನುಡಿದನು ಒಲಿದು ಬಾಹುಕನು
ತನ್ನಿನಿಯಳಿಗೆ ವಿಧಿ ಬರೆದನೇ ಶಾಸನವ ಮೀರುವರಾರೆನುತ
ಮರುಗಿದನು ನಳನೃಪತಿ
ತಾರೆಯ ಮರನನದರೊಳು ಸಂದ ಫಲಪರ್ಣಂಗಳೆಣಿಸದೆ
ಸೂತ ಪೇಳು
ತೊಲಗಿದೆನು ಇಂದಿನಲಿ ಶುಭಮಂಗಳಕರವು ನಿನಗಪ್ಪುದು
ಎನಗಿಂದು ಶೋಕಜ್ವಾಲೆ ಪರಿಹಾರವಾಯ್ತು
ಮಂಗಳದೇಳಿಗೆಯು ಪಸರಿಸಿತು
ಭಿನ್ನವಿಲ್ಲದೆ ಕೊಂಡ ನಾಚಿಕೆಗಿನ್ನು ಹದನೇನು

೧೪. **ಬಾಹುಕನ ಕಣ್ಣ ಕದಿರಿನಲ್ಲಿ ನಳನೃಪನ ತೇಜ ಕಂಡ ದಮಯಂತಿ** / ೭೧
ಲೋಕದ ಸ್ತ್ರೀಯರೊಳಗಿನ್ನಿಲ್ಲ ರಚಿಸುವ ಪಾಕದಲಿ
ಇವನ ನಿಜಾಯತವ ತಾ ಬಲ್ಲೆ ಕರೆಸೆಂದಳು ಸರೋಜಮುಖಿ
ನಡೆಯುತೆಡಹಿದ ಪಟ್ಟದಾನೆಯ ಪಿಡಿದು ಕೊಲ್ಲುವರುಂಟೆ
ಮೇಘದಲಿ ನುಡಿದನು ವಾಯು ನಳನೃಪನೊಡನೆ ಸತ್ಯವನು

# ಕಥಾ ಸಂದರ್ಭ

ಧರ್ಮರಾಜನು ದುರ್ಯೋಧನನೊಂದಿಗೆ ಜೂಜಿನಲ್ಲಿ ಸೋತು ರಾಜ್ಯವನ್ನು ಕಳೆದುಕೊಂಡನು. ಸತ್ಯವನ್ನು ಬಿಡದೆ ತನ್ನ ತಮ್ಮಂದಿರು, ಪತ್ನಿ ದ್ರೌಪದಿ, ರಾಜಮುನಿ ಧೌಮ್ಯ ಮತ್ತು ಮಂತ್ರಿಗಳೊಂದಿಗೆ ತೀರ್ಥಯಾತ್ರೆ ಮಾಡುತ್ತ ಕಾಮ್ಯಕವನದಲ್ಲಿ ಸಂಚರಿಸುತ್ತಿದ್ದನು. ಅರ್ಜುನನು ದಿವ್ಯಾಸ್ತ್ರಗಳ ಸಂಪಾದನೆಗಾಗಿ ಇಂದ್ರಲೋಕಕ್ಕೆ ಹೋಗಿದ್ದನು. ಅವನು ಹಿಂದಿರುಗಿ ಬರದಿರಲು ಧರ್ಮರಾಯನು ಚಿಂತಾಕ್ರಾಂತನಾದನು. ಅರ್ಜುನನ ಸ್ಥಿತಿ ಏನಾಗಿರಬಹುದು? ಅವನು ತಪಸ್ಸಿನಲ್ಲಿ ನಮ್ಮನ್ನು ಮರೆತುಹೋದನೇ ಎಂದು ವ್ಯಥೆಪಡುತ್ತಿದ್ದನು. ಆಗ ದೇವತೆಗಳ ಒಡೆಯ ಇಂದ್ರನು ಕಳುಹಿಸಿದ ಸೂರ್ಯತೇಜಸ್ಸಿನ ರೋಮಶ ಮುನಿಗಳು ತಮ್ಮ ಮುನಿಗಣದೊಂದಿಗೆ ಕಾಮ್ಯಕವನಕ್ಕೆ ಆಗಮಿಸಿದರು. ಅವರ ಜೊತೆ ಶ್ರೇಷ್ಠ ಮುನಿಗಳಾದ ಚ್ಯವನ, ಗೌತಮ, ಕಪಿಲ, ಭೃಗು, ಭಾರ್ಗವ, ಭರದ್ವಾಜ, ಅತ್ರಿ, ಕೌಶಿಕ, ವಾಮದೇವ, ಮರೀಚಿ, ಮೈತ್ರೇಯ, ಕಣ್ವ, ಅಂಗೀರಸ, ಶುಕ, ಗಾಲವ, ಪರಾಶರ ಮುಂತಾದವರು ಬಂದರು.

ಯುಧಿಷ್ಠಿರನು ಸಹೋದರರೊಡನೆ ಹೋಗಿ ಮುನಿಮುಖ್ಯರನ್ನು ಕಂಡು ಪಾದಗಳಿಗೆ ನಮಸ್ಕರಿಸಿದನು. ಅವರನ್ನು ಆದರಪೂರ್ವಕವಾಗಿ ತಳಿರ ಮಂಟಪಕ್ಕೆ ಕರೆದುಕೊಂಡು ಬಂದನು. ಆ ವರ ಮುನೀಂದ್ರರಿಗೆ ಕೈ ತೊಳೆಯಲು ನೀರು ನೀಡಿ, ಪಾದಗಳನ್ನು ತೊಳೆದು ಉಪಚರಿಸಿದನು. ಅವರನ್ನು ಭಯ ಭಕ್ತಿಯಿಂದ ಸ್ವಾಗತಿಸಿ ದರ್ಭಾಸನದ ಮೇಲೆ ಕುಳ್ಳಿರಿಸಿದನು. ಕೈ ಮುಗಿದು,

'ನೀವು ಪಾವನ ದೇವ ಋಷಿಗಳು. ಮೂರು ಲೋಕಗಳಲ್ಲಿ ವಿಶೇಷ ಮನ್ನಣೆ ಪಡೆದವರು. ಸತ್ಯಸಂಧರು. ನಿರ್ಮಲಾತ್ಮಕರು. ನಿಮ್ಮ ಮಹಿಮೆಯನ್ನು ತಿಳಿಯಲು

ಯಾರಿಗೆ ಸಾಧ್ಯ! ಅದು ನನ್ನ ಶಕ್ತಿಗೆ ಮೀರಿದ್ದು. ನಿಮ್ಮ ಪಾದಸೇವೆ ಮಾಡುವ ಭಾಗ್ಯ ನಮಗೆ ದೊರಕಿತು. ನಾವು ಧನ್ಯರು' ಎಂದು ತಲೆ ಬಾಗಿಸಲು ರೋಮಶ ಮುನಿಗಳು ಹರ್ಷಚಿತ್ತರಾಗಿ ಕೇಳಿದರು,

'ಧರಣೀ ಪತಿಯೇ, ನಿನ್ನ ಪತ್ನಿ, ತಮ್ಮಂದಿರು, ಮಕ್ಕಳು, ಸಚಿವರು, ದೌಮ್ಯ ಮುನೀಂದ್ರ ಎಲ್ಲರೂ ಕ್ಷೇಮವೇ?'

'ನಿಮ್ಮ ಪರಮ ಕರುಣಾಮೃತ ನಮ್ಮನ್ನು ಕಾಪಾಡುತ್ತಿದೆ. ಅದೇ ನಮ್ಮ ಕ್ಷೇಮ' ಎಂದು ಹೇಳಿದ ಧರ್ಮರಾಜನು ತುಸು ತಡೆದು ತನ್ನ ಒಳಮನದ ಸಂಕಟವನ್ನು ನಿಟ್ಟುಸಿರು ಬಿಡುತ್ತ ಅಭಿವ್ಯಕ್ತಿಸಿದ :

'ಪೂಜ್ಯರೇ, ದಾರುಣಿಯನ್ನು ಜೂಜಿನಲ್ಲಿ ಸೋತು, ತಮ್ಮಂದಿರು ಮತ್ತು ಪತ್ನಿಯ ಜೊತೆ ಬಂದು ಘೋರ ಕಾಡಿನಲ್ಲಿ ಗಿರಿಗುಹೆಗಳ ಮಧ್ಯದಲ್ಲಿರುವೆ. ಸುಖದಿಂದ ವಂಚಿತರಾಗಿ ನನ್ನಂತೆ ಬಳಲಿದವರು ಈ ಭೂಲೋಕದಲ್ಲಿ ಯಾರಾದರೂ ಇದ್ದಾರೆಯೆ? ಪಾವನ ಕುಲತಿಲಕರೆ ಅಂತಹವರಿದ್ದರೆ ಹೇಳಿ.'

'ಎಲೆ ಮಹೀಪತಿ, ನೀನು ಏತಕ್ಕೆ ಈ ರೀತಿ ತೊಳಲಾಡುತ್ತಿರುವೆ? ಈ ಹಿಂದೆ ನಳ, ಹರಿಶ್ಚಂದ್ರ, ಶ್ರೀರಾಮಚಂದ್ರ ಮೊದಲಾದ ರಾಜರು ಕಾಡಿನಲ್ಲಿ ತಮ್ಮ ಪತ್ನಿಯನ್ನು ಅಗಲಿದ್ದಾರೆ. ಕಷ್ಟ ಅನುಭವಿಸಿದ್ದಾರೆ. ಅವರಂತೆ ನಿನಗೆ ತೊಂದರೆ ಆಗಿಲ್ಲ. ವೃಥಾ ಮನ ನೋಯಿಸಿಕೊಳ್ಳಬೇಡ' ಎಂದು ಸಮಾಧಾನದ ನುಡಿ ಹೇಳುತ್ತ ಮುಂದುವರಿದು 'ಇಲ್ಲಿ ನಿನಗೆ ಪವಿತ್ರ ಋಷಿಗಳ ಸಮೂಹವೇ ರಾಜಸಭೆ. ಶ್ರೀಕೃಷ್ಣನ ಕರುಣಾಸಮುದ್ರವೇ ಸಂಪತ್ತು. ಭೀಮಾರ್ಜುನರು ಮತ್ತು ಮಾದ್ರಿ ತನಯರಾದ ನಕುಲ ಸಹದೇವರೇ ಬಾಹುಬಲ. ಪತ್ನಿಯೇ ಭೋಗೈಕ ಸಂಪತ್ತು. ಇಂತಹ ಉತ್ತಮ ವನರಾಜ್ಯ ನಿನಗಿರುವಾಗ ನಿನಗೆ ಸರಿಸಮನಾಗಿ ಯಾರಿದ್ದಾರೆ ಹೇಳು. ಓಹ್ ಚಿಂತೆಯನ್ನು ಬಿಡು.'

'ಮುನಿನಾಥನೇ, ಹಾಗಾದರೆ ನಳಮಹಾರಾಜನು ರಾಜ್ಯವನ್ನು ಹೇಗೆ ಕಳೆದುಕೊಂಡನು? ಹೆಂಡತಿಯನ್ನು ಹೇಗೆ ಅಗಲಿದನು? ಮತ್ತೆ ಯಾರ ಸಹಾಯದಿಂದ ನಳನೃಪನು ರಾಜ್ಯವನ್ನು ಮರಳಿ ಪಡೆದನು? ಎಂಬುದನ್ನು ನೀವು ದಯಮಾಡಿ ನಮಗೆ ತಿಳಿಸಿರಿ.'

'ಧರ್ಮರಾಜನೇ, ಭೂಲೋಕದ ರಾಜರುಗಳಲ್ಲಿ ನಳ ಚಕ್ರವರ್ತಿಯು ಮಹಾಶಕ್ತಿಶಾಲಿ ಯೆಂದು ಹೆಸರುವಾಸಿಯಾಗಿದ್ದನು. ಸೂತ ಮುನಿಯು ಆತನ ಪವಿತ್ರವಾದ ಕಥೆಯನ್ನು ಮುನಿಗಳಿಗೆಲ್ಲ ಹೇಳಿದನು. ಅದೇ ಕಥೆಯನ್ನು ಅಗಸ್ತ್ಯ ಮುನಿಯು ಪ್ರೀತಿಯಿಂದ ಶ್ರೀರಾಮಚಂದ್ರನಿಗೆ ಹೇಳಿದನು.'

# ನಿಷಧ ಪತಿ ನಳನೃಪ

ವಸುಧೆ ಪತಿಯೇ, ನೀನೀಗ ಈ ನಳ ಚರಿತ್ರೆಯನ್ನು ಕೇಳು. ನಿಷಧವೆಂಬ ಒಂದು ಮಹಾನಗರವಿದ್ದು ಅಲ್ಲಿ ಅಸಂಖ್ಯ ಗೋಪುರ ಪ್ರಾಕಾರಗಳ ಶಿಖರಗಳು ಕಂಗೊಳಿಸುತ್ತಿದ್ದವು. ಅಲ್ಲಿ ಚಿನ್ನ, ರತ್ನಪ್ರಭೆಗಳಿಂದ ಶೋಭಿಸುವ ದೇವಾಲಯಗಳಿದ್ದವು. ಅದು ಭೂಲೋಕ ದಲ್ಲಿಯೆ ಆಶ್ಚರ್ಯವನ್ನುಂಟು ಮಾಡುವ ನಗರವಾಗಿತ್ತು.

ಆ ನಗರದಲ್ಲಿ ತಿರುವು ತಿರುವುಗಳನ್ನು ಹೊಂದಿ ಮುಂಚಾಚಿದ ಕೋಟೆಯ ಬುರುಜುಗಳಿದ್ದವು. ವಿಶಾಲವಾದ ಹುಲಿಮುಖದ ಬಾಗಿಲು, ಹೊಳೆಯುವ ಮಣಿವಜ್ರಗಳ ಬಾಗಿಲುವಾಡದ ಮೇಲ್ಭಾಗ ಆಕರ್ಷಣೀಯವಾಗಿತ್ತು. ಅಲ್ಲಿ ವಿಶಾಲ ವೇದಿಕೆ, ಬಂಗಾರ ದಿಂದ ಹೊಳೆಯುವ ಮೆಟ್ಟಿಲುಗಳನ್ನು ಹೊಂದಿದ ಸೌಧಗಳಿದ್ದವು. ಅವುಗಳ ಮೇಲಿನ ಶೋಭಾಯಮಾನ ಕಲಶಗಳಿಂದ ಆ ನಗರವು ರಂಜಿಸಿತ್ತು.

ಆಕಾಶಕ್ಕೆ ತಾಗುವ ಕೋಟೆಯ ತೆನೆ (ಮೇಲ್ಭಾಗದ ರಚನೆ) ಮತ್ತು ಅಲ್ಲಿರುವ ಆಳ್ವೆರಿಗಳು (ಕೋಟೆಯ ತೆನೆಯ ಹಿಂಬದಿಯಲ್ಲಿ ಸುತ್ತಲೂ ಓಡಾಡಲು ಮಾಡಿರುವ ದಾರಿ); ಕೋಟೆಯನ್ನು ಬಳಸಿರುವ ಪಾತಾಳದಂತಿರುವ ಕಂದಕಗಳು; ಕೋಟೆಯ ಸುತ್ತಲೂ ಆವರಿಸಿರುವ ಕನ್ನಡಿಯ ಸಾಲುಗಳು ಗಗನ ವೀದಿಯ ತಾರೆಗಳಂತೆ ಸೊಗಸಾಗಿ ಕಾಣುತ್ತಿದ್ದವು. ಆ ರತ್ನ ಪ್ರಭೆಯಲ್ಲಿ ನಗರವು ಶೋಭಿಸುತ್ತಿತ್ತು.

ಆ ನಿಷಧ ನಗರದ ಮನೋಹರ ಬೃಹತ್ ಕಟ್ಟಡಗಳಿಂದ ಯುವತಿಯರ ಸಂಗೀತ, ವೀಣಾರವದ ಸಂಭ್ರಮ ಹೊರಹೊಮ್ಮಿ ಶೋಭಾಯಮಾನವಾಗಿತ್ತು.

ಆ ಶ್ರೇಷ್ಠ ನಗರವು ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಕುಶಲಕಲಾ ಪ್ರವೀಣರು, ಕವಿಗಳು, ಮಲ್ಲರು ಹಾಗು ಗಾಯಕರಿಂದ ಕೂಡಿತ್ತು. ಅದು ಅಸದೃಶರಾದ

ರಥಿಕರು, ರಣವೀರರಿಂದ ಕೂಡಿ ಆನೆ, ರಥ, ಕುದುರೆ, ಕಾಲಾಳುಗಳ ಅಗಣಿತ ಚತುರಂಗಬಲವನ್ನು ಹೊಂದಿತ್ತು. ಅಲ್ಲಿಯ ಉದ್ಯಾನದಲ್ಲಿ ಸಾಲ, ಬಿಲ್ವ, ಬೇಲ, ಜಂಬುನೇರಳೆ, ದಾಳಿಂಬ, ಬಕುಳ, ಆಲ, ತಾಳೆ, ಅಡಿಕೆ, ಈಚಲ ಮರಗಳಿದ್ದವು. ಅವುಗಳ ಜೊತೆಗೆ ಬಾಳೆ, ಖರ್ಜೂರ, ಶ್ರೀಗಂಧ, ಹಲಸು, ತಕ್ಕೋಲ (ಒಂದು ಬಗೆಯ ಸುಗಂಧ ವೃಕ್ಷ ಮತ್ತು ಅದರ ಕಾಯಿ), ಕೇದಗೆ, ಬೆಟ್ಟಮಲ್ಲಿಗೆಗಳಿದ್ದು ಅದು ಬಣ್ಣ ಬೆಡಗಿನೊಂದಿಗೆ ವಿವಿಧ ಕಂಪುಗಳು ನೆರೆದು ರಂಜಿಸುತ್ತಿತ್ತು.

ಭೂರಮಣ ಧರ್ಮರಾಜನೇ ಕೇಳು. ಆ ನಿಷಧ ನಗರವನ್ನು ವೈರಿಗಳಿಗೆ ಸಿಂಹಸ್ವಪ್ನ ವಾಗಿದ್ದ ಪರಾಕ್ರಮಿ ರಾಜ ವೀರಸೇನನು ಆಳುತ್ತಿದ್ದನು. ಆತನ ಮಗ ನಳನೃಪ. ಅವನು ಅತಿ ಶೂರನು ಪರಮ ಧರ್ಮ ವಿಚಾರಿಯು ಆಗಿದ್ದನು. ಚಂದ್ರಕುಲ ತಿಲಕನಾದ ಅವನು ಘನಗಂಭೀರ ವ್ಯಕ್ತಿಯಾಗಿ ಸಪ್ತದ್ವೀಪಗಳ ರಾಜರಿಗೆ ಅಧಿಪತಿಯಾಗಿ ಅವರನ್ನು ಕಾಪಾಡುತ್ತಿದ್ದನು.

ಸಮುದ್ರದಿಂದ ಮೇರುಪರ್ವತದವರೆಗಿನ ಭೂಪಾಲರು ನಳಮಹಾರಾಜನಿಗೆ ಕಪ್ಪವನ್ನು ಕೊಡುತ್ತಿದ್ದರು. ಅಸಂಖ್ಯಾತ ಯುದ್ಧ ವೀರರು, ಭುಜಬಲರು, ಮಣಿ ಮಕುಟಧಾರಿಗಳು ನಳಭೂವರನ ಪಾದಸೇವೆ ಮಾಡುತ್ತ ಸೇವಿಸುತ್ತಿದ್ದರು. ಅವನ ಆಸ್ಥಾನವು ದೇವೇಂದ್ರನ ಓಲಗದಂತೆ ಮೆರೆಯುತ್ತಿತ್ತು.

# ವಿದರ್ಭ ನಗರದ ಭೀಮನೃಪ

ಭೂಮಿಪತಿ ಕುಂತೀತನಯನೇ ಕೇಳು. ಇತ್ತ ಉತ್ತರ ದಿಕ್ಕಿನಲ್ಲಿ ಬೆಳಗುವ ಅಮರಾವತಿ ಯಂತೆ ವಿದರ್ಭ ನಗರವಿತ್ತು. ಅದು ಚೆಲುವಾದ ಕಟ್ಟಡಗಳಿಂದ, ಹೇಮ ಮತ್ತು ರತ್ನ ಖಚಿತವಾದ ಮಹಡಿ ಮನೆಗಳಿಂದ ಶೋಭಿಸುತ್ತಿತ್ತು. ಆ ನಗರಕ್ಕೆ ಭೀಮನೃಪನು ಅಧಿಪತಿಯಾಗಿದ್ದನು. ಅವನು ಉತ್ತಮ ಗುಣಶಾಲಿಯೂ, ವಿನಯವಂತನೂ ಆಗಿದ್ದು; ಶೂರನೂ, ಚತುರನೂ, ಸೌಭಾಗ್ಯವಂತನೂ ಆಗಿದ್ದನು. ಆದರೆ ಅವನು ತನಗೆ ಮಕ್ಕಳಿಲ್ಲ ವೆಂದು ಕಳವಳಪಡುತ್ತಿದ್ದನು. ಆಗ ಮುನಿಶ್ರೇಷ್ಠರಾದ ದಮನರು ಆಗಮಿಸಿದರು.

ಭೀಮನೃಪನು ಅವರನ್ನು ಸ್ವಾಗತಿಸುತ್ತ ನಿಂತುಕೊಂಡು ಕೈಮುಗಿದು ವಿನಯದಿಂದ ಹೇಳಿದ,

'ಪೂಜ್ಯರೇ, ಪುತ್ರಸಂತಾನವಿಲ್ಲದ ಸಿರಿಯಿಂದೇನು ಪ್ರಯೋಜನ.'

ಆ ನುಡಿಯಲ್ಲಿ ಅವನ ಮನದ ನೋವು ಅಡಗಿತ್ತು. ಅದನ್ನು ಕೇಳಿದ ಮುನಿಯು ಕರುಣೆಯಿಂದ ರಾಜನನ್ನು ಸಮಾಧಾನಪಡಿಸುತ್ತ 'ಮಕ್ಕಳನ್ನು ಪಡೆಯದ ತಂದೆಗೆ ಸಂತಾಪವಿರುತ್ತದೆ' ಎಂದು ನುಡಿದು ತಮ್ಮ ಯೋಗದೃಷ್ಟಿಯಿಂದ ಮುಂದಾಗುವುದನ್ನು ತಿಳಿದು ಅವನೊಡನೆ ಪ್ರಕಟವಾಗಿ 'ಅರಸನೇ, ಯಾಗವನ್ನು ಮಾಡು. ನಿನಗೆ ಸಂತಾನ ಪ್ರಾಪ್ತಿಯಾಗುವುದು' ಎಂದು ಹೇಳಿ ಆಶೀರ್ವದಿಸಿದನು.

ಭೀಮನೃಪನು ಆ ಶ್ರೇಷ್ಠಮುನಿಯ ವಾಣಿಗೆ ತಲೆಬಾಗಿದನು. ಶುಭದಿನದಂದು ಸುಲಗ್ನದಲ್ಲಿ ಮನಃಪೂರ್ವಕವಾಗಿ ಯಾಗವನ್ನು ದೇವತೆಗಳು ಮತ್ತು ನರರು ತೃಪ್ತರಾಗು ವಂತೆ ನಡೆಸಿದನು.

ಅರಸ ಧರ್ಮರಾಜನೇ ಕೇಳು. ಯಾಗವು ಪೂರ್ಣಗೊಂಡ ಮೇಲೆ ಭೀಮನೃಪನು ಮುನಿಮುಖ್ಯರನ್ನು ಸತ್ಕರಿಸಿ ಅವರಿಗೆ ಯೋಗ್ಯ ರೀತಿಯಲ್ಲಿ ಉಪಚಾರ ಮಾಡಿ ಬೀಳ್ಕೊಟ್ಟನು. ನೃಪನ ಅರಸಿಯು ಗರ್ಭಿಣಿಯಾದಳು. ಮಂಗಳಕರ ಸುಲಗ್ನದಲ್ಲಿ ಒಳ್ಳೆಯ ತಾರಾಬಲವಿರುವ ವೇಳೆಯಲ್ಲಿ ಲೋಕೈಕ ಸುಂದರಿಯಾದ ಮಗಳಿಗೆ ಜನ್ಮವಿತ್ತಳು. ಆಗ ನಭದಲ್ಲಿ ದೇವ ದುಂದುಭಿ ಮೊಳಗಿತು. ಇಳೆಯಲ್ಲಿ ಪುರಜನರು ಸಂಭ್ರಮಿಸಿದರು. ರಾಜನು ದಮನ ಮುನಿಗೆ ವಂದಿಸುತ್ತ ತನ್ನ ಮಗಳಿಗೆ ಒಂದು ಸೂಕ್ತವಾದ ಹೆಸರು ಸೂಚಿಸಲು ಕೇಳಿಕೊಂಡನು. ಅವರು 'ಕಮಲಮುಖಿಯಾದ ಈ ಸುತೆಗೆ ದಮಯಂತಿ ಯೆಂಬ ಹೆಸರು ಉತ್ತಮ' ಎಂದು ತಿಳಿಸಿ ತಮ್ಮ ಆಶ್ರಮಕ್ಕೆ ಹೊರಟರು.

ಗುಂಗುರು ಕೂದಲುಗಳ, ಹವಳದಂತ ತುಟಿಯ, ಅಂದವಾದ ತೋಳುಗಳ, ಶಂಖದಂತಿರುವ ಕುತ್ತಿಗೆಯ, ಹೊಳೆಯುವ ಕಣ್ಣುಗಳ, ಸಂಪಿಗೆಯಂತಹ ಮೂಗಿನ, ಚಂದ್ರನಂತಿರುವ ಹಣೆಯ ಕುವರಿ ರಾಜಭವನದಲ್ಲಿ ಆಡುತ್ತಾಡುತ್ತ ಬೆಳೆದಳು. ನೋಡ ನೋಡುತ್ತಿದ್ದಂತೆ ಸಿಂಹದ ನಡುವಿನ, ಹಂಸದ ನಡೆಯ, ದೊಡ್ಡ ಸ್ತನಗಳ, ಚಿಗುರು ಕೈಗಳ ಕಮಲಮುಖಿ ದಮಯಂತಿ ಅರಮನೆಯಲ್ಲಿ ನಲಿದಾಡುತ್ತಿದ್ದಳು.

## ಶರ್ವಾಣಿ ರತಿಯರಿಗೆಣೆಯೆನಿಪ ಸುಂದರಿ

ದಮಯಂತಿಯು ಗುಣ, ಶೀಲ, ಮಾತಿನ ರೀತಿ, ಗಂಭೀರತೆ, ಉದಾರತೆ, ಅನುಪಮ ವಿದ್ಯೆ, ಗುರು ಮತ್ತು ದೈವಭಕ್ತಿಯಲ್ಲಿ ಹೆಸರು ಪಡೆದಿದ್ದಳು. ಅವಳು ಪಾರ್ವತಿ ಮತ್ತು ರತಿಯರಿಗೆ ಸಮನೆನಿಸುವ ಸುಂದರಿಯಾಗಿದ್ದಳು. ಹಾಗಾಗಿ ಈ ಲೋಕದಲ್ಲಿ ಸಾಮಾನ್ಯ ಹೆಂಗಸರು ಅವಳಿಗೆ ಸರಿಗಟ್ಟುವರೇ! ಎಂದು ರೋಮಶ ಮುನಿಯು ಧರ್ಮರಾಜನಿಗೆ ಕಥೆ ಹೇಳುತ್ತ ಪ್ರಶ್ನಿಸಿದನು. ಕಥೆ ಮುಂದುವರಿಸಿ,

ಧರ್ಮನಂದನನೇ, ಒಮ್ಮೆ ಭೀಮನೃಪನು ಓಲಗದಲ್ಲಿ ಇಳೆಯ ರಾಜ ಮಹಾರಾಜರನ್ನು ಕುರಿತು ಮಾತುಕತೆ ನಡೆಸುತ್ತಿದ್ದನು. ಆಗ ಕವಿಗಳು ನಳನೃಪನ ಶೀಲ, ಸಂಪತ್ತು, ವಿಶಾಲ ತಿಳಿವನ್ನು ಪರಿಚಯಿಸಿದರು. ಅವನ ರೂಪ, ಲಾವಣ್ಯ, ಗುಣಗಳನ್ನು ಸವಿಸ್ತಾರ ವಾಗಿ ಕೊಂಡಾಡಿದರು. ಅಲ್ಲಿದ್ದ ದಮಯಂತಿಯು ನಳನ ಆ ವಾರ್ತೆಯೆಲ್ಲವನ್ನು ಮನ ಒಲಿದು ಕೇಳಿದಳು. ಅವಳ ಮನಸ್ಸು ಹಿಗ್ಗಿ ಅಂತಃಕರಣ ಅವನನ್ನು ಬಯಸಿತು. ಅವಳ ಚಿತ್ತ ಅವನಲ್ಲಿ ಕೇಂದ್ರೀಕೃತವಾಯಿತು. ನಳ ನೃಪನನ್ನೇ ನೆನೆಯುತ್ತ ಅವನ ರೂಪವನ್ನು ಕಲ್ಪಿಸಿಕೊಂಡು ನಲ್ಮೆಯಿಂದ ಚಿತ್ರ ರಚಿಸಿದಳು. ಮನದ ಭಾವರೇಖೆಯಲ್ಲಿ ನಳನ ರೂಪು ಆಕಾರಗೊಂಡಂತೆ, ಅವನಲ್ಲಿ ಮೋಹ ಬಲವಾಯಿತು.

ಆ ಮನೋಹರ ಸಮಯಕ್ಕೆ ಕಾಯುತ್ತಿದ್ದಂತೆ ಕಾಮನು ತನ್ನ ಚತುರಂಗಬಲವನ್ನು

ಬೇಗ ಬೇಗ ಒಂದುಗೂಡಿಸಿದನು. 'ಖೋ' ಎಂದು ಉಲ್ಲಾಸದ ದನಿಗೈಯ್ಯುತ್ತ ರಾಜಹಂಸಗಳು, ತುಂಬಿಗಳ ಹಿಂಡು ನಲಿದಾಡಿದವು. ಕೋಗಿಲೆಗಳು ಪಂಚಮ ಸ್ವರದಲ್ಲಿ ಮನ್ಮಥನ ಭಾವದಿಂಚರದಲ್ಲಿ ಆರ್ಭಟಿಸಿ ಕೂಗಿದವು. ಗಿಳಿಗಳು ಕಿಳಿರೆಂದು ಕೂಗಿ ಪ್ರೀತಿಯ ಮಧುರ ದನಿ ಹೊಮ್ಮಿಸಿದವು. ನವಿಲುಗಳು ಗರಿಗೆದರಿ ನರ್ತಿಸಿದವು. ಆಗ ಮನ್ಮಥನು ಹೂ ಬಾಣಗಳನ್ನು ಜೋಡಿಸಿಕೊಂಡು ದಮಯಂತಿಯ ಮೇಲೆ ಎಸೆದನು.

## ಕಾಮಗತ್ತಲೆ ಕಣ್ಣಿನಲಿ ಪೆರ್ಚಿದುದು

ಸ್ಮರನ ಹೂಗಣೆ ದಮಯಂತಿಯನ್ನು ನಾಟಿತು. ಅದರ ಪರಿಣಾಮವೆಂಬಂತೆ ಅವಳು ಅನ್ನವನ್ನು ಉಣ್ಣದಾದಳು. ಕಣ್ಣಿನಲ್ಲಿ ಕಾಮದ ಕತ್ತಲೆ ಆವರಿಸಿತು. ಸಖಿಯರು ಮಾಡುವ ಮನ್ನಣೆಯನ್ನು ಒಪ್ಪದಾದಳು. ಬಲು ಬೇಸರದಿಂದ ಬಳಲ ತೊಡಗಿದಳು. ಅವರು ಯಾವುದೇ ವಿಷಯವನ್ನು ವಿವರಿಸಿ ಹೇಳಲು ತೊಡಗಿದರೆ ಮನಸ್ಸು ಕೊಡದೆ ಮಾತಾಡದಾದಳು. ದೇಹ ಬಣ್ಣಗುಂದಿತು. ಮದನನ ಅಂಬಿನ ಪ್ರಯೋಗಕ್ಕೆ ಒಳಗಾದ ಅವಳು ಎಳೆ ಹೆಣ್ಣು ಮಕ್ಕಳು ಪಡೆಯುವ ಸುಖವನ್ನು ತೊರೆದಳು.

ದಮಯಂತಿಯ ರಾಜ ವದನವನ್ನು ವೀಕ್ಷಿಸುತ್ತ ಅವಳ ಕೆಳದಿಯರು ಅವಳ ಅಂತರಂಗದ ವಿರಹದ ಉರಿಯನ್ನು ಅರಿತುಕೊಂಡರು. ತಕ್ಷಣವೇ ಅವಳನ್ನು ನಗರದ ಉದ್ಯಾನವನಕ್ಕೆ ಕರೆದುಕೊಂಡು ಹೋದರು. ಹಿಗ್ಗು ಹಿಂಗಿದ ಅವಳನ್ನು ಹೊಳಪು ಹೊಮ್ಮಿಸುವ ಸುಗಂಧ ಹೂಗಳಿರುವ ಮರಗಳಲ್ಲಿ, ಎಳೆ ಚಿಗುರುಗಳ ನೆರಳಿನಲ್ಲಿ, ಪರಿಮಳವನ್ನು ಸೂಸುವ ಪನ್ನೀರಿನಲ್ಲಿ ವಿವಿಧ ಬಗೆಯಲ್ಲಿ ಉಪಚರಿಸಿದರು. ಅವಳ ಸಂತೋಷ ಹೊಮ್ಮದ ಮುಖವನ್ನು ಕಂಡ ಕೆಲವು ಗೆಳತಿಯರು ಅದರ ಕಾರಣವೇನೆಂದು ಯೋಚಿಸಿದರು.

ಆ ಕೋಮಲೆಯ ಕಠಿಣ ಮನ ಕರಗಿಸಲು ಮೃದು ಶರೀರಕ್ಕೆ ಕರ್ಪೂರ ಮತ್ತು ಗಂಧವನ್ನು ಲೇಪಿಸಿದರು. ಕೆಲವರು ಮನ ಮತ್ತು ದೇಹದ ಉರಿ ಆರಲು ಬೀಸಣಿಗೆಯಿಂದ ತಂಪಾದ ಗಾಳಿ ಬೀಸಿದರು. ಕೆಲವರು ಹೂ ಹಾಸಿಗೆ ಹಾಸಿ ಉಪಚರಿಸಿದರು.

## ಕಡು ಪಾಪಿ ಅಂಗಜ

ಈ ರೀತಿ ಗೆಳತಿಯರು ದಮಯಂತಿಗೆ ಹಲವು ಬಗೆಯ ಶೈತ್ಯೋಪಚಾರವನ್ನು ಮಾಡಿದರೂ ಅವಳ ವಿರಹದ ಕಾವು ತಗ್ಗುವ ಬದಲು ಹೆಚ್ಚಾಗುತ್ತ ಹೋಯಿತು. ಇದಕ್ಕೆ ಪರಿಹಾರವಿನ್ನೇನು ಎಂದು ಚಪಲ ಚಿತ್ತದ ಸಖಿಯರು ಯೋಚಿಸುತ್ತ – ಇದಕ್ಕೆಲ್ಲ ಆ ಕಡು ಪಾಪಿ ಕಾಮನೇ ಕಾರಣವೆಂದು ಬೈಯ್ದುಕೊಂಡರು. ಅವಳನ್ನು ಸಂತೈಸುತ್ತ ಕಂಪು ಸೊಂಪಿನ ಹಲವು ಮರಗಳಿರುವ ತೋಪಿಗೆ ಕರೆದೊಯ್ದರು.

ಆ ತೋಪಿನಲ್ಲಿ ಬಕುಳ, ನಿಂಬೆ, ಆಲ, ಕೇದಗೆ, ಸರಳ (ಧೂಪದ ಮರ), ಪಾಟಳಿ (ಪಾದರಿಗಿಡ ಮತ್ತು ಅದರ ಹೂವು), ಬೆಟ್ಟ ಮಲ್ಲಿಗೆ, ಸಂಪಿಗೆ, ಮಾವು, ಬೇಲ, ದಾಳಿಂಬ, ಅಡಕೆ ಮೊದಲಾದ ಗಿಡ ಮರ ಬಳ್ಳಿಗಳಿದ್ದವು. ಆ ತೋಪನ್ನು ತಮ್ಮ ಕಲಕಂಠ, ಬಣ್ಣ ಬೆಡಗಿನಿಂದ ಆಕರ್ಷಣೀಯವಾಗಿಸಿದ ಗಿಳಿ, ನವಿಲು, ಜಿಲಿಬಿಲಗ (ಇದನ್ನು 'ಚಿಲಿಮಿಲಿಗ' ಎಂದು ಕರೆಯುವರು. ಇದು ಚಿಲಿಮಿಲಿ ಎಂದು ಶಬ್ದ ಮಾಡುವ ಒಂದು ಬಗೆಯ ಹಕ್ಕಿ), ಗೀಜುಗ, ಬಕ, ಹಿಸುಬ (ಹಸಿರು ಪಾರಿವಾಳ), ಗೊರವಂಕ, ಟಿಟ್ಟಿಭ, ಕೋಗಿಲೆ, ಚಕೋರ, ಮೀಂಚುಳ್ಳಿ ಮೊದಲಾದ ಪಕ್ಷಿಗಳಿದ್ದವು.

ಸುಗುಣ ಗೆಳತಿಯರು ದಮಯಂತಿಯನ್ನು ಅಲ್ಲಿಂದ ಸಮೀಪದಲ್ಲಿರುವ ರಾಜ ಸರೋವರಕ್ಕೆ ಕರೆದೊಯ್ದರು. ಅಲ್ಲಿ ಜೋಡಿಸಿದ ರತ್ನಗಳ ಸಾಲು ಸೋಪಾನಗಳಿದ್ದವು. ಅದರಲ್ಲಿಯ ಕೆಂದಾವರೆಯ ಹೂಗಳು ಮೂಡುವ ಎಳೆ ಮೊಗ್ಗುಗಳ ಸುತ್ತ ದುಂಬಿಗಳು ಮಕರಂದ ಹೀರಲು ಗುಂಯ್‌ಗುಡುತ್ತಿದ್ದವು. ಅಲ್ಲಿ ಹಂಸ, ಬಕ, ಚಕ್ರವಾಕಗಳು ನಲಿದಾಡುತ್ತ ಸೊಗಸು ಬೀರಿದ್ದವು. ನೀರಾಟದಲ್ಲಿ ಚತುರರಾದ ಸಖಿಯರು ದಮಯಂತಿಯೊಡನೆ ಸೊಗಸಿನಿಂದ ಉಲ್ಲಾಸದಲ್ಲಿ ಜಲಕ್ರೀಡೆಯಾಡಿದರು.

ನೀರಾಟವಾಡಿದ ಅನಂತರ ಕೆಳದಿಯರು ಶಶಿಮುಖಿ ದಮಯಂತಿಯನ್ನು ಸರೋವರದ ದಡಕ್ಕೆ ಕರೆದುಕೊಂಡು ಬಂದರು. ಅಮೃತಶಿಲೆಯ ಮೇಲೆ ಕೂಡಿಸಿದರು. ವಸ್ತ್ರಾಭರಣಗಳಿಂದ ಶೃಂಗರಿಸಿದರು. ಭೀಮನೃಪನ ಆಜ್ಞೆಯಂತೆ ಸಖಿಯರು ಈ ರೀತಿ ವಿವಿಧ ಶೈತ್ಯೋಪಚಾರಗಳಿಂದ ಅವಳ ವಿರಹ ತಾಪದ ಉಪಶಮನವನ್ನು ಮಾಡಿದರು.

# ಲೋಲಲೋಚನೆಯೆಂತು ತನಗಹಳೆನುತ ಚಿಂತಿಸಿದ

**ಕೇ**ಳು ಕುಂತೀತನಯ, ಹೀಗೆ ಭೀಮನೃಪನ ಮಗಳು ದಮಯಂತಿಯ ವಿರಹ ಬಲಿದು ಹೆಚ್ಚಾಗುತ್ತಿತ್ತು. ಅತ್ತ ನಿಷಧ ನಗರವನ್ನು ಆಳುವ ನಳಚಕ್ರವರ್ತಿಯು ಸಾಲು ಸಾಲಾಗಿ ಪೋಣಿಸಿದ ರತ್ನ ಸಿಂಹಾಸನದಲ್ಲಿ ಕುಳಿತು ಓಲಗವನ್ನು ನಡೆಸುತ್ತಿದ್ದನು. ಆ ಆಸ್ಥಾನದಲ್ಲಿ ಗೌಳ, ವಂಗ, ಕಳಿಂಗ, ಕುಂತಳ, ಚೋಳ, ಬರ್ಬರ, ಸಿಂಧು, ಕೇರಳ, ಲಾಳ, ಮಗಧ, ವರಾಳ, ಸೌರಾಷ್ಟ್ರ ಮೊದಲಾದ ದೇಶಗಳ ರಾಜರುಗಳಿದ್ದರು. ಅದು ಯುವತಿಯರು, ಮಂತ್ರಿಗಳು, ಕಡುಗಲಿಗಳು, ನಟರು, ಗಾಯಕರು ಮತ್ತು ಕವಿಗಳಿಂದ ಶೋಭಿಸುತ್ತಿತ್ತು. ಆ ಸಮಯದಲ್ಲಿ ದೇಶಯಾತ್ರೆ ಮಾಡುವ ಬ್ರಾಹ್ಮಣನೊಬ್ಬನು ಅಲ್ಲಿಗೆ ಆಗಮಿಸಿದನು. ಅವನನ್ನುದ್ದೇಶಿಸಿ ನಳಮಹಾರಾಜನು ಕೇಳಿದನು,

'ತಮ್ಮ ಈ ಭುವಿಯ ಸಂಚಾರದಲ್ಲಿ ತಾವು ಕಂಡ ವಿಶೇಷ ಸಂಗತಿ ಏನಾದರು ಉಂಟೆ?'

'ಧರಣೀಶನೇ ಕೇಳು. ವಿದರ್ಭ ನಗರದಲ್ಲಿ ಭೀಮನೃಪನಿದ್ದಾನೆ.'

'ಹೌದು, ಗೊತ್ತಿದೆ.'

'ಅವನು ಎಷ್ಟು ಪುಣ್ಯ ಫಲದಿಂದ ಅಂತಹ ಸುಂದರ ಮಗಳನ್ನು ಪಡೆದಿದ್ದಾನೆಯೋ!'

'ಜಗದಲ್ಲಿ ಸಂತತಿಯೇ ಜೀವನ. ಅದರಲ್ಲೇನು ವಿಶೇಷ?'

'ಪ್ರಭುಗಳೇ ಅದು ದಿಟ. ಆದರೆ ಅವಳ ರೂಪ ಗುಣಗಳನ್ನು ನನ್ನಿಂದ ಬಣ್ಣಿಸಲು ಸಾಧ್ಯವೆ? ಆ ಯುವತಿ ಲೋಕದ ಇತರ ತರುಣಿಯರಂತೆ ಅಲ್ಲ!'

‘ಓಹ್! ನಿನ್ನ ಮಾತೇ ಅತಿ ರಂಜಿತವಾಗಿದೆ.’

‘ಹೌದು ನೃಪನೆ. ಅವಳದು ಅತಿ ನಿರ್ಮಲ ಆಕಾರ. ಬಲು ಮಿದುವಾದ ಸವಿ ನುಡಿ. ಈ ಭೂಲೋಕದಲ್ಲಿ ದಮಯಂತಿಗೆ ಸರಿಸಮನಾದವರನ್ನು ನಾನು ಕಂಡಿಲ್ಲ.’

‘ಭೂಸುರನೆ, ದೇವತೆಗಳು ಅತಿ ಸುಂದರ ತನು ಹೊಂದಿದವರಲ್ಲವೆ?’

‘ಅರಸನೇ ಕೇಳು. ಶ್ರೀಕೃಷ್ಣನ ಸೊಸೆಯ ರೂಪವನ್ನು, ಚಂದ್ರನ ಮಗಳ ಚೆಲುವನ್ನು, ಮೈನಾಕನ ಸಹೋದರಿಯ ಅಂದವನ್ನು, ಶ್ರೀ ಲಕ್ಷ್ಮಿಯ ಸೌಂದರ್ಯವನ್ನು ದಮಯಂತಿಯ ರೂಪು ಲಾವಣ್ಯ ಮರೆಯಿಸುತ್ತದೆ!’

‘ನಿನ್ನ ನುಡಿ ಅಚ್ಚರಿಯಾಗಿದೆ!’

‘ಹೌದು ಪ್ರಭುಗಳೆ. ಸತ್ಯದ ನುಡಿ ಯಾವಾಗಲೂ ಅಚ್ಚರಿ! ಆ ಸರಸಿಜಾಕ್ಷಿಗೆ ಸರಿ ಮಿಗಿಲಾದವರು ಲೋಕದಲ್ಲಿ ಯಾರೂ ಇಲ್ಲ!’

‘ಅಂದರೆ?’

‘ಅದೊಂದು ಸೌಂದರ್ಯಾನುಭವ. ಬಂಗಾರದ ಓಲೆಯ ಕಾಂತಿ ಕೆನ್ನೆಯ ಮೇಲೆ ಕಂಗೊಳಿಸಿ, ಸೆರಗು ಜಾರಿ, ಸ್ತನ ಕುಸಿದು, ಸೊಂಟ ಅಲುಗಾಡಿದಾಗ ಹೊಮ್ಮುವ ಮಂದಹಾಸ ಒಂದು ಬೆಳಕು!’

‘ವಿಪ್ರೋತ್ತಮ ನೀನೇನು ಕವಿಯೆ?’

‘ಕಣ್ಣು ಬಣ್ಣಗಾರ ಅಲ್ಲವೇ ಪ್ರಭು. ಆ ದಮಯಂತಿಯ ತೂಗುವ ತುರುಬಿನ ಭಾರಕ್ಕೆ ಕೊರಳು ಬಾಗಿ ಆಕೆ ಕೈಯಲ್ಲಿ ಹಿಡಿದ ವೀಣೆಯತ್ತ ಗಮನಹರಿಸಿದ ನೋಟದ ಸೊಬಗು ದಿವ್ಯ! ಪ್ರಭುವೇ ದಿವ್ಯ!!’

‘ನಿನ್ನ ಬಣ್ಣನೆಯಿಂದ ನನ್ನ ಕಿವಿಯೇ ಕವಿಯಾಗಿ ಕಲ್ಪನೆಯಲ್ಲಿ ಸುಖಿಸುತ್ತಿದೆ.’ ಎಂದು ಬ್ರಾಹ್ಮಣನ ನುಡಿನುಡಿಗೆ ಬೆರಗಿನ ಕಣ್ಣು ಕಿವಿಯಾಗಿ ನಳ ಮೆಚ್ಚಿಗೆ ಸೂಚಿಸಿ ತಲೆದೂಗಿದನು. ಅವನ ಕಣ್ಣಿಗೆ ದಮಯಂತಿ ಗೋಚರಿಸಿದಂತಾಗಲು, ಅವಳನ್ನು ಮೋಹಿಸಿದನು. ಕಾಮನ ಪುಷ್ಪಬಾಣಗಳ ಹೊಡೆತಕ್ಕೆ ಒಳಗಾಗಿ ಮನಸ್ಸಿನಲ್ಲಿ ನೊಂದು ಕೊಂಡು ‘ಶಿವಶಿವಾ! ಈ ಚೆಲುವೆ ಎಂದು ನನ್ನವಳಾಗುವಳೋ’ ಎಂದು ಚಿಂತಿಸಿದನು.

## ತರುಣಿಯ ನೆನೆದು ಹೊಂಪುಳಿವೋಗಿ

ನಳನೃಪನು ದಮಯಂತಿಯ ಒಂದೊಂದೆ ಗುಣಗಳನ್ನು ಮನದೊಳಗೆ ಸವಿ ಮಾಡಿ ಸುಖಿಸಿ, ನೆನೆನೆನೆದು ಪುಳಕಗೊಂಡನು. ವಿರಹ ಭಾವಕ್ಕೆ ಒಳಗಾಗಿ ಮದನವಶ

ನಾದನು. ಶರೀರ ಕುಂದಿದಂತಾಯಿತು. ಆಗ ಬೇಡರು ತಮ್ಮ ತಂಡದೊಂದಿಗೆ ಬಂದರು. ಹಣ್ಣು ಹಂಪಲುಗಳನ್ನು ಕಾಣಿಕೆಯಾಗಿ ಕೊಟ್ಟರು. ಕೈ ಮುಗಿದು 'ಅರಸ ಇಂದು ಮೃಗಗಳ ಘನ ಬೇಟೆಯಿದೆ. ತಾವು ದಯಮಾಡಿಸಬೇಕು' ಎಂದು ಬೇಡಿಕೊಂಡರು. ನೃಪತಿ ನಸುನಗುತ್ತ ಒಪ್ಪಿಗೆ ಸೂಚಿಸಿದನು. ತನ್ನ ಒಳಮನದಲ್ಲಿ – ವಿರಹವನ್ನು ಶಮನ ಗೊಳಿಸಿಕೊಳ್ಳಲು ಇದು ಸರಿಯಾದುದು – ಎಂದುಕೊಂಡನು. ಶಬರರನ್ನು ಬೀಳ್ಕೊಟ್ಟು ಓಲಗದಿಂದ ಅರಮನೆಗೆ ತೆರಳಿದನು. ಅದೇ ಸಮಯಕ್ಕೆ ಸೂರ್ಯನು ಪಶ್ಚಿಮದ ಕಡಲಲ್ಲಿ ಮುಳುಗಿದನು.

ಮರುದಿನ ಸೂರ್ಯೋದಯವಾಗುತ್ತಲೇ ನಳನೃಪನು ತನ್ನ ಸಕಲ ಸೈನ್ಯವನ್ನು ಕರೆ ಕಳುಹಿಸಿದನು. ವೀರ ಸೈನಿಕರು ಝಳಪಿಸುವ ಖಡ್ಗ ಕಠಾರಿ ಮೊದಲಾದ ಆಯುಧಗಳೊಡನೆ ಮತ್ತು ಬೇಟೆಯಾಡಲು ನಾನಾ ರೀತಿಯ ಬಲೆಗಳು, ಕೋಲು, ಕಣ್ಣಿಗಳೊಡನೆ ನಿಷಧಾಪುರದ ಹೊರಗಡೆ ಸೇರಿದರು.

ಅರಸ ಧರ್ಮರಾಜನೇ ಕೇಳು. ಶಶಿಕುಲ ಶಿರೋಮಣಿಯಾದ ನಳಚಕ್ರವರ್ತಿಯು ದಿವ್ಯ ವಸ್ತ್ರಗಳನ್ನು ಧರಿಸಿಕೊಂಡನು. ನವರತ್ನಾಭರಣಗಳನ್ನು ತೊಟ್ಟುಕೊಂಡನು. ಸುಗಂಧವನ್ನು ಲೇಪಿಸಿಕೊಂಡನು. ವಾಯುವೇಗದ ಕುದುರೆಯನ್ನು ತರಿಸಿ ಹತ್ತಿ ಬೇಟೆಗಾರರೊಂದಿಗೆ ಸಾಗಿದನು. ಆಗ ನೆಲ ಬಿರಿಯುವಂತೆ ಅನೇಕ ವಾದ್ಯಗಳು ಮೊಳಗಿದುವು. ಬೇಟೆಗಾರರು ಕಾಡನ್ನು ಹೊಕ್ಕು ಪ್ರಾಣಿ ಸಮೂಹವನ್ನು ಸುತ್ತುವರೆದರು. ಅವರನ್ನು ಎದುರಿಸಲಾಗದೆ ಅವು ನೆಗೆದು ಓಡಿ ಹೋಗಲು ಪ್ರಯತ್ನಿಸಿದುವು. ಅವರು ಆನೆಗಳನ್ನು ಹೊಡೆದುರುಳಿಸಿದರು. ಹುಲಿ, ಕರಡಿ, ಮುಸು, ಮೊಲ, ಮಂಗ ಮುಂತಾದ ಸಕಲ ಪ್ರಾಣಿಗಳನ್ನು ನಾಶ ಮಾಡಿದರು. ಪರ್ವತ ಶಿಖರಗಳನ್ನು ಏರಿ ಮರಗಳ ಗುಂಪಿನಲ್ಲಿ ಬಲೆ ಬೀಸಿದರು. ಮೃಗಗಳನ್ನು ಅಟ್ಟಿಸಿಕೊಂಡು ಹೋಗಿ ಆಡುವ – ಸೋಹುವೇಂಟೆಯಲ್ಲಿ ಅವುಗಳನ್ನು ಹಿಡಿದರು. ಆಗ ಒಂದು ಘೋರ ಸಿಂಹವು ಅಬ್ಬರಿಸಿ ಕೋಪದಿಂದ ಸೈನ್ಯದ ಮೇಲೆ ಎರಗಿ ನಾಶಪಡಿಸಿತು. ಅದು ಅದೇ ಆರ್ಭಟದಲ್ಲಿ ಮುನ್ನುಗ್ಗಿ ಬರುವುದನ್ನು ಕಂಡ ನಳಮಹಾರಾಜನು ಅದರ ಬೆನ್ನತ್ತಿ ಸಂಹರಿಸಿದನು. ಅನಂತರ ಬೇಟೆಯನ್ನು ನಿಲ್ಲಿಸಿ, ಬಳಲಿದ ಸೇನೆಯೊಡನೆ ನಗರದ ಉದ್ಯಾನಕ್ಕೆ ಬಂದನು. ವಿರಹ ಬಲಿದು, ನಲಿವು ಹಿಂಗಿದ ದುಗುಡ ಮನದೊಡನೆ ಕೊಳದಲ್ಲಿ ಕೈ, ಕಾಲು, ಮುಖ ತೊಳೆದುಕೊಂಡನು. ವಿಷಾದ ಮನಸ್ಸಿನೊಡನೆ ವನದೊಳಗೆ ಸಂಚರಿಸಿದನು.

ಆ ಕೊಳದ ತೀರದಲ್ಲಿ ಅನೇಕ ಮರಗಳಿದ್ದವು. ಅಲ್ಲಿ ಒಂದು ಮರದ ಬುಡದಲ್ಲಿ ಹೊಸತಾಗಿ ಉದುರಿದ ಹೂಗಳಿದ್ದವು. ಅದರ ಮೇಲೆ ಬ್ರಹ್ಮದೇವನ ಕುದುರೆ ನಿದ್ರಾವಶ ವಾಗಿದ್ದುದನ್ನು ಕಂಡನು. ಅಲ್ಲಿಯೇ ಶುಭ್ರ ತೇಜದ ರಾಜ ಹಂಸವಿರುವುದನ್ನು ನೋಡಿದನು.

## ಅಕ್ಕರದಿ ಮೆಲ್ಲನೆ ಕರವ ನೀಡುತ ಪಿಡಿದ ಹಂಸವನು

ಆ ಹಂಸದ ಕೊಕ್ಕು ಮತ್ತು ಪಾದಗಳು ಕೆಂಪಾಗಿದ್ದು, ಗರಿಗಳು ಮತ್ತು ಇಡೀ ದೇಹ ಸುಂದರವಾದ ಅಚ್ಚ ಬಿಳಿ ಬಣ್ಣದಿಂದ ಕೂಡಿತ್ತು. ಆ ಹಂಸ ಪರಮ ತೇಜಸ್ಸಿನಿಂದ ಹೊಳೆಯುತ್ತಿತ್ತು. ಅದನ್ನು ಕಂಡು ಬೆರಗಾದ ನಳನು 'ಹರಹರಾ! ಇದರ ಅತಿಶಯ ಅಂದ ಸೌಂದರ್ಯವನ್ನು ವಿಷ್ಣುವೇ ಬಲ್ಲ!' ಎಂದುಕೊಂಡನು. ಪ್ರೀತಿಯಿಂದ ಮೆಲ್ಲನೆ ಸಾಗಿ ಕೈಯಿಂದ ಅದನ್ನು ಹಿಡಿದುಕೊಂಡನು. ಆಗ ಹಂಸವು ಒದರಿ ಬಿಡಿಸಿಕೊಳ್ಳಲು ಪ್ರಯತ್ನಿಸಿತು. ರಾಜನು ಅದು ಕದಲದಂತೆ ಬಿಗಿಯಾಗಿ ಹಿಡಿದನು. ಅದು ಬಹಳ ಭೀತಿಗೊಂಡು ನಡುಗಿತು. ಅವನ ಮುಖ ಕಮಲವನ್ನು ದೀನತೆಯಿಂದ ನೋಡುತ್ತ ಹೃದಯ ಕರಗುವ ಮಾತೊಂದನ್ನು ಆಡಿತು :

'ಮದಗಜಕ್ಕೆ ಚಿಕ್ಕಾಡು ಲೆಕ್ಕವೆ? ಕೈಗೆ ಸಿಕ್ಕವರನ್ನು ಕೊಲ್ಲುವುದು ಸರಿಯೆ?'

ಅದನ್ನು ಕೇಳಿದ ಮಹಾರಾಜನು ತನ್ನ ಹಿಡಿತ ಸಡಿಲಗೊಳಿಸಿದನು. ಮುದ್ದು ಮುದ್ದು ಮಾಡುತ್ತ ಹೇಳಿದನು :

'ನುಡಿ ನುಡಿ ಎಲೆ ಹಂಸ'

'ಆನೆಗಳನ್ನು ಕೊಲ್ಲುವ ಸಿಂಹವನ್ನು ನರಿಗಳು ಎದುರಿಸುವುದು ಸಾಧ್ಯವೇ? ಹಾಗೆ ನಾನು. ಭಯಂಕರ ಶತ್ರುಗಳನ್ನು ಸಂಹಾರ ಮಾಡುವುದು ರಾಜ ನೀತಿ. ನೀನು ನನ್ನನ್ನು ಕೊಲ್ಲುವುದು ಸರಿಯಲ್ಲ. ಹಾಗೆ ಕೊಂದರೆ ನೋಡಿದವರು ನಗುವುದಿಲ್ಲವೇ? ರಾಜನೇ, ಪಾಪ ಕಾರ್ಯವಾದ ಪರಹಿಂಸೆ ಬಿಡು.'

'ಓಹ್ ಹಂಸವೆ, ಧವಳ ದೇಹದಂತೆ ನಿನ್ನ ಮನಸ್ಸು ಶುದ್ಧ. ನಿನ್ನ ಧ್ವನಿ ಇಂಪು.'

## ನೃಪ ನೀನೆನ್ನ ಭುಂಜಿಸಲು ಒಡಲಿಗಾಪ್ಯಾಯನವೆ

'ಒಂದು ಬೊಗಸೆ ಹಾಲಿನಿಂದ ಬಡವನಿಗೆ ಔತಣ ಸಾಧ್ಯವೇ? ಮಂಜು ಸುರಿದರೆ ಕೆರೆ ತುಂಬುವುದೇ? ನನ್ನನ್ನು ತಿಂದರೆ ನಿನ್ನ ಹೊಟ್ಟೆಗೆ ಹಿತವಾಗುವುದೇ? ಪೊಡವಿ ಪತಿಯೆ, ನನ್ನ ಮನೆಯಲ್ಲಿಯ ಹೆಂಡತಿ ಮಕ್ಕಳ ದುಗುಡ ದುಃಖವನ್ನು ನೋಡು. ನನ್ನನ್ನು ಬಿಡು.'

'ನಿನ್ನ ಕೊಕ್ಕು ಮತ್ತು ಪಾದ ಚೆಂಬಣ್ಣ. ನಿನ್ನ ನುಡಿ ಚೆನ್ನುಡಿ. ಅದರಿಂದ ಹೊಮ್ಮಲಿ ಚೆಂಬೆಳಕು.'

'ಮಹಾರಾಜನೇ ಮರ ಹತ್ತಿದವರನ್ನು, ಹುತ್ತವೇರಿದವರನ್ನು, ಕಾಳಗದಲ್ಲಿ ವಿನಯ

ತೋರಿದವರನ್ನು, ಆಯುಧ ಮುರಿದು ಬರಿಗೈಯಾದವರನ್ನು, ನೀರಿಗೆ ಇಳಿದು ನಿಂತವರನ್ನು, ತರುಣಿಯರ ಮರೆಯಲ್ಲಿರುವವರನ್ನು, ಯುದ್ಧರಂಗದಿಂದ ಓಡುವವರನ್ನು ಕೊಲ್ಲುವುದು ನ್ಯಾಯವೇ?'

'ಚತುರ ಹಂಸವೇ, ನಿನ್ನ ನೀತಿ ನಡಾವಳಿಯ ನುಡಿಗೆ ಮೆಚ್ಚಿದೆನು. ನಿನ್ನನ್ನು ಕೊಲ್ಲುವುದಿಲ್ಲ. ನೀನು ನಿನ್ನ ಮನೆಗೆ ಹೋಗು' ಎಂದು ಹೇಳುತ್ತ ನಾಚಿ ನೀರಾಗಿ ಮೃದುವಾಗಿ ಅದನ್ನು ತಟ್ಟಿ, ಮುದ್ದಿಸಿ ಬಿಟ್ಟುಬಿಟ್ಟನು.

ಹಂಸವು ಮೈಕೊಡವಿ ಗರಿಗೆದರಿ ಹಾರಿತು. ಆದರೆ ಮತ್ತೆ ಹಿಂತಿರುಗಿ ಬಂದಿತು. ರಾಜನ ಮುಂದೆ ಕುಳಿತು ವಿನಯದಿಂದ ಹೇಳಿತು :

'ಭೂರಮಣ, ನೀನು ನನ್ನ ಪ್ರಾಣ ಉಳಿಸಿ ಉಪಕಾರ ಮಾಡಿದೆ. ನಾನೂ ನಿನಗೆ ಉಪಕಾರ ಮಾಡುವೆನು.'

'ಪಕ್ಷಿತೇಜ ಹಂಸವೇ, ನಿನ್ನ ನುಡಿ ಕೇಳಿ ನಾನು ಮೂಕನಾಗಿರುವೆ. ಅದೇನು ಹೇಳು.'

'ಸಾರ ಹೃದಯನೇ, ನಾನು ಹೇಳುವುದನ್ನು ಮನಸ್ಸಿಟ್ಟು ಕೇಳು. ಈ ಪ್ರಪಂಚದಲ್ಲಿ ನಿನ್ನ ಹೊರತು ಯಾರಿಗಿದೆ ಈ ಪರಮ ಪುಣ್ಯ?'

'ಮೃದು ಮರಾಲವೆ, ಆ ಪುಣ್ಯವನ್ನು ವಿವರಿಸಿ ಹೇಳು.'

## ಪರಮ ಪುಣ್ಯಾಂಗನೆ, ಮಹಾ ಸುಂದರಿ

'ಅರಸನೇ ಕೇಳು. ಇಲ್ಲಿಂದ ಬಹಳ ದೂರದಲ್ಲಿ ದೇವ ಲೋಕಕ್ಕೆ ಸಮನಾದ ವಿದರ್ಭ ನಗರವಿದೆ. ಅದನ್ನು ಭೀಮನೃಪಾಲ ಆಳುತ್ತಿದ್ದಾನೆ. ಅವನಿಗೆ ದಮಯಂತಿಯೆಂಬ ಮಗಳಿದ್ದಾಳೆ. ವನಜಾಕ್ಷಿಯಾದ ಅವಳು ಪರಮ ಪುಣ್ಯಾಂಗನೆ, ಮಹಾ ಸುಂದರಿ, ನಿಪುಣೆ, ಗಜಗಮನೆ, ನಯಗುಣ ಭರಿತೆ, ಸೊಬಗಿನ ಸೋನೆ.'

'ನಾನು ಆಸ್ಥಾನದಲ್ಲಿ ಓರ್ವ ವಿಪ್ರನಿಂದ ಇದನ್ನು ಕೇಳಿದ್ದೆ.'

'ನಾನು ಆ ಸೊಬಗಿ ದಮಯಂತಿಯನ್ನು ನೋಡಿ ಕಣ್ತುಂಬಿಕೊಂಡಿರುವೆ. ಆ ಚೆಲುವನ್ನು ವರ್ಣಿಸಲು ಸಾಧ್ಯವಿಲ್ಲ. ಭಾವಿಸಿದಷ್ಟು ಅಚ್ಚರಿ. ಯೌವನ ಹೊರಹೊಮ್ಮುವ ನಗು ಮೊಗ, ಹೊನ್ನಕಾಂತಿಯ ಬೊಗಸೆಗಂಗಳು, ತೆಳು ನಡು, ಸೆಳ್ಳುಗುರು(ಉದ್ದವೂ ಚೂಪು ಆದ ಉಗುರು)ಗಳಿಂದ ಬೆಡಗಿನ ಕಾಂತೆ ರಂಜಿಸುತ್ತಿದ್ದಾಳೆ.'

## ರೂಪಿನಲಿ ನೀನತಿ ಚೆಲುವ ನಿನಗವಳು ಪಾಸಟಿ

'ನಿನ್ನ ವರ್ಣನೆ ನನಗೆ ಆ ದಮಯಂತಿಯನ್ನು ಕಾಣಿಸಿದೆ.'

'ನೋಡಿದೊಡೆ ಭೂಲೋಕದ ಸ್ತ್ರೀಯರಲ್ಲಿ, ಅಮರಾವತಿಯ ಹೆಣ್ಣುಗಳಲ್ಲಿ, ವಿತಳದಲ್ಲಿರುವ ನಾರಿಯರಲ್ಲಿ ದಮಯಂತಿಗೆ ಸಮಾನದವರು ಯಾರೂ ಇಲ್ಲ. ನಳನೃಪನೇ, ನೀನು ರೂಪಿನಲ್ಲಿ ಅತಿ ಚೆಲುವ. ನಿನಗೆ ಅವಳು ಸಮ ಸುಂದರಿ. ಅವಳಿಗೆ ನೀನೆ ಯೋಗ್ಯ ವರ, ಬೇರೆ ಯಾರೂ ಅಲ್ಲ. ಅವಳು ನಿನಗೆ ಒಲಿಯುವಂತೆ ಮಾಡುತ್ತೇನೆ. ಶಿವನ ಕೃಪೆ ನಿನಗಿದೆ. ನಮ್ಮಲ್ಲಿ ಸುಳ್ಳು ನುಡಿ ಇಲ್ಲ. ನಮ್ಮನ್ನು ನಂಬು.'

ಅವನಿಪತಿ ನಳನು ಹಂಸೆಯ ನುಡಿಗೆ ಮನಸೋತನು. ನಸುನಗುತ್ತ ವಿರಹ ಹೊಮ್ಮಿಸಿದ ಬಯಕೆಯ ಭಾವದಲ್ಲಿ ನಾಚಿ ಹೇಳಿದನು :

'ರಾಜಹಂಸವೇ, ಮನ್ಮಥನ ಬಾಣದ ಹೊಡೆತಕ್ಕೆ ನೊಂದಿದ್ದೇನೆ. ಈ ಶರೀರ ವೇದನೆಯನ್ನು ಸೈರಿಸಲಾಗುತ್ತಿಲ್ಲ. ಕರುಣೆಯಿಂದ ಆ ವನಿತೆಯನ್ನು ನನಗೆ ಪತ್ನಿಯನ್ನಾಗಿ ಮಾಡಿ ಪ್ರಾಣವನ್ನು ಉಳಿಸು. ನನಗೆ ನೀನೇ ಪರಮ ಬಂಧು. ಮನಸ್ಸಿಗೆ ಹರ್ಷವನ್ನುಂಟು ಮಾಡು. ನೀನು ಅವಳಲ್ಲಿಗೆ ಹೋಗಿ ಹಿಂತಿರುಗಿ ಈ ಬನಕ್ಕೆ ಬರುವ ತನಕ ನಾನು ಇಲ್ಲಿಯೇ ಇರುತ್ತೇನೆ.'

# ಹಂಸ ಪ್ರಣಯದೌತ್ಯ

ಧರ್ಮರಾಜನೇ ಕೇಳು. ನಳನೃಪಾಲನಿಂದ ಬೀಳ್ಕೊಂಡ ಹಂಸವು ವನದಿಂದ ಹೊರಟು ಪ್ರೀತಿಯಿಂದ ವಾಯುವೇಗದಲ್ಲಿ ಸಾಗಿತು. ಲತಾಂಗಿ ದಮಯಂತಿಯ ಪತಿಯ ಕೀರ್ತಿ ವಿಸ್ತಾರವಾದ ಹಾಗೆ ಅದು ಗಗನದಲ್ಲಿ ಹಾರಿ ವಿದರ್ಭ ನಗರವನ್ನು ಕಂಡಿತು. ಅಲ್ಲಿ ಕೆಳಗಿಳಿಯಿತು. ಆ ನಗರವು ಕನಕ ಮತ್ತು ರತ್ನಗಳಿಂದ ನಿರ್ಮಿಸಲ್ಪಟ್ಟ ಸೌಧಗಳಿಂದ, ಜನ ಸಮೂಹದಿಂದ, ಉದ್ಯಾನವನಗಳಿಂದ ಹಾಗೂ ವಿಶಾಲ ಬೀದಿಗಳಿಂದ ಕಂಗೊಳಿಸುತ್ತಿತ್ತು. ಅಲ್ಲಿ ಹಂಸವು ಮನ್ಮಥನ ಹರಿತ ಬಾಣಗಳಿಂದ ಬಳಲುತ್ತಿರುವ ದಮಯಂತಿಯು ತನ್ನ ಆಪ್ತ ಬಳಗ ಹಾಗೂ ಗೆಳತಿಯರ ಓಲಗದಲ್ಲಿರುವುದನ್ನು ಕಂಡಿತು.

## ಮದನನ ಮೊನೆಯಲಗಿನಲಿ ಬಳಲ್ವ ಸತಿಯನು ಕಂಡುದೌ ಹಂಸೆ

ನವರತ್ನಗಳಲ್ಲಿ ಒಂದಾದ ಇಂದ್ರನೀಲಗಳಿಂದ ಮಾಡಿದ ಗೋಡೆ, ವಜ್ರದಿಂದ ರಚಿಸಿರುವ ಸಾಲುಗಂಭಗಳು, ಪಚ್ಚೆ ಹಲಗೆಯ ಮೇಲೆ ಮುತ್ತಿನ ಚಾವಣಿಯ ಚೌಕಟ್ಟು, ಹವಳದಿಂದ ಕೆತ್ತಿದ ಬೋದಿಗೆ, ತೊಲೆಯನ್ನು ನಿಲ್ಲಿಸಲು ಸಾಲು ಮಣಿಗಳಿಂದ ನಿರ್ಮಿಸಿದ ಮಂಟಪದಲ್ಲಿರುವ – ಮಂಚದ ಮೇಲೆ ನಳನ ಚಿಂತೆಯಲ್ಲಿರುವ ದಮಯಂತಿಯನ್ನು ಹಂಸ ನೋಡಿತು. ಅವಳು ಚಂದ್ರನಂತಹ ಹಣೆಯುಳ್ಳವಳಾಗಿ ಕಸ್ತೂರಿಯ ತಿಲಕವಿಟ್ಟಿದ್ದಳು. ಮುತ್ತಿನ ಹಾರ ಧರಿಸಿ ರತ್ನಖಚಿತ ಉಂಗುರ, ಬಂಗಾರದ ಬಳೆಗಳನ್ನು ಹಾಕಿಕೊಂಡಿದ್ದಳು. ಬಗೆ ಬಗೆಯ ನಿರಿ ಹಿಡಿದ ಸೀರೆಯುಟ್ಟು ಕಾಲಂದಿಗೆಯಲ್ಲಿ ಸೌಂದರ್ಯದ ಖನಿಯಾಗಿದ್ದಳು. ಅವಳ ಸುತ್ತಲೂ ತರುಣಿಯರು ಸುತ್ತುವರೆದಿದ್ದರು.

ಕವಿದ ಕಪ್ಪಾದ ಮೋಡದಲ್ಲಿ ಹೊಳೆಹೊಳೆಯುವ ಮಿಂಚಿನ ಬಳಗವೆಂಬಂತೆ ಹಂಸೆಗಳು ನಭದಿಂದ ಇಳಿದು ಬಂದು, ಆ ಲಲನೆಯರ ಸಭಾಮಂಡಲದಲ್ಲಿ ಕುಳಿತವು. ನಳಿನಲೋಚನೆ ದಮಯಂತಿಯ ಕಣ್ಣಿಗೆ ನಳನಿಂದ ಬಂದಿರುವ ಹಂಸ ಕಂಡಿತು. ಅವಳು ತನ್ನ ಸಖಿಯರನ್ನು ನೋಡುತ್ತ ಅದರ ಚೆಲುವನ್ನು ಬಣ್ಣಿಸಿದಳು. ಅದನ್ನು ಹಿಡಿಯಬೇಕೆಂದು ಮನಸ್ಸಾಗಿ ಅದರ ಚಲನವಲನವನ್ನು ಗಮನಿಸಿದಳು. ಮೆಲ್ಲಮೆಲ್ಲನೆ ಹೆಜ್ಜೆ ಇಡುತ್ತ ಅದನ್ನು ಹಿಡಿಯಲು ತನ್ನ ಚಿಗುರಂತಿರುವ ಕೈಗಳನ್ನು ಚಾಚಿದಳು. ಅವಳ ನೂಪುರ ಘಲ್ಲು ಘಲ್ಲೆನಲು ಹಂಸವು ಅತ್ತಲಿತ್ತ ಸರಿದಾಡುತ್ತ ಒಂದೆಡೆ ನಿಲ್ಲದೆ ಓಡಾಡಿತು. ಅವಳ ಅಂಗೈ ಹತ್ತಿರ ಬಂದಂತೆ ಬಂದು ಕೈಗೆ ಸಿಗದೆ ಅಡ್ಡಾಡಿಸಿತು.ಹೂ ತುಂಬಿದ ನವ ಮಲ್ಲಿಗೆಯ ಬನಕ್ಕೆ ನುಗ್ಗಿ ಅದರ ಪೊದರಿನಲ್ಲಿ ಹೊಕ್ಕಿತು.

ದಮಯಂತಿಯು ತನ್ನ ಗೆಳತಿಯರನ್ನು ಪಕ್ಕಕ್ಕೆ ಸರಿಸಿ ತಾನೇ ಮೆಳೆಯನ್ನು ಹೊಕ್ಕಳು. ಅಲ್ಲಿ ಕುಲುಕುತ್ತ ನಡೆವ ಹಂಸವನ್ನು ಹಿಡಿಯಲು ಬಗ್ಗಿದಾಗ ತೆಳುನಡು ಬಳುಕಿತು. ಸ್ತನಭಾರದಿಂದ ಮೇಲ್ಸೆರಗು ಜಾರಿತು. ಮುಡಿಗೂದಲು ಚದುರಿತು. ಜಲಜಮುಖಿಯಾದ ಅವಳು ಬೆವರಿ ಹೋದಳು. ಕೊರಳಿನ ಏಕಾವಳಿ ಸರವು ಅಲ್ಲಾಡಲು, ಸೆರಗನ್ನು ಸರಿಪಡಿಸಿಕೊಂಡಳು. ಬಳಲಿ ನಿಟ್ಟುಸಿರು ಬಿಡುತ್ತ ನಿಂತಳು. ಆಗ ಅವಳನ್ನು ನೋಡುತ್ತ ಹಂಸವು.

'ಎಲೆ ಸರೋಜಮುಖಿಯೇ, ನೀನು ನನಗಾಗಿ ಆಸೆಪಟ್ಟು, ಹಿಡಿವೆನೆಂಬ ಛಲದಿಂದಿರುವೆ. ಅದನ್ನು ಬಿಡು. ನಾವು ಅಂಬರದ ಪಕ್ಷಿಗಳು. ನಾವು ಯಾರಿಗೂ ಸಿಗುವವರಲ್ಲ.'

'ಆದರೆ ನನಗೆ ನಿನ್ನನ್ನು ಹಿಡಿದು ಮುದ್ದಾಡುವ ಆಸೆ.'

'ಚೆಲುವೆ ಬರಿದೆ ಏಕೆ ಬಳಲುವೆ? ನಾನು ಬಂದಿರುವ ಕಾರಣವನ್ನು ತಿಳಿಸುವೆ, ಕೇಳು.'

'ನೀನು ಅಚ್ಚ ಬಿಳಿಯ ಶುಭ. ಬಂದ ಹಿತದ ಕಾರಣ ಹೇಳು.'

## ನಿನ್ನ ರೂಪಿಗೆ ಸಲುವುದೌ ನಳನುನ್ನತದ ಸೌಂದರ್ಯ

'ನಾನು ನಳಚಕ್ರವರ್ತಿಯ ಬಳಿ ವಾಹನವಾಗಿದ್ದೇನೆ. ಅವನು ನನ್ನನ್ನು ಪ್ರೀತಿಯಿಂದ ಮುದ್ದು ಮಾಡಿ ಸಲಹುತ್ತಾನೆ. ಈ ಭೂಲೋಕದ ನಳಕೂಬರ, ಜಯಂತರ ಚೆಲುವನ್ನು, ಮದನನ ರೂಪ ಸೌಂದರ್ಯವನ್ನು ಮೀರುವ ಅತಿಶಯ ಸ್ಫುರದ್ರೂಪಿ ನನ್ನೊಡೆಯ.' ಎಂದು ಹೇಳಿ ಕುಲು ಕುಲು ಕುಪ್ಪಳಿಸಿ ಹರ್ಷದ ಕಣ್ಣನ್ನು ಝುಳಪಿಸಿ ಮಾತು ಮುಂದುವರೆಸಿತು 'ಅವನ ಅನುಪಮ ಸೌಂದರ್ಯ ನಿನ್ನ ರೂಪಿಗೆ ಸರಿಯಾಗಿ

ಹೊಂದುತ್ತದೆ. ಜಗತ್ತಿನಲ್ಲಿ ನಿಮ್ಮ ಜೋಡಿಗೆ ಸರಿಸಮನಾದವರನ್ನು ನಾನು ಕಾಣೆ.'

ಆ ನುಡಿ ಕೇಳಿ ಗುಣ ಸಂಪನ್ನೆಯಾದ ದಮಯಂತಿ ನಾಚಿದಳು. ನಸು ನಗುತ್ತ ವಿನಯದಿಂದ ನುಡಿದಳು :

'ಪರಮ ಗುಣನಿಧಿ ಪಕ್ಷಿಯೇ ಕೇಳು. ಪಾಪಿಯೂ ಬಹಿಷ್ಕೃತನೂ ಆದ ಮನ್ಮಥನು ನನ್ನ ಮೇಲೆ ಪುಷ್ಪ ಬಾಣಗಳನ್ನೆಸೆದು ನನ್ನೀ ಒಡಲನ್ನು ಆಯಾಸಗೊಳಿಸಿದನು. ನನಗುಂಟಾಗಿರುವ ವಿರಹ ತಾಪವನ್ನು ತನ್ನ ಕರುಣರಸದಿಂದ ಶಾಂತವಾಗಿಸಬೇಕೆಂದು ನೀನು ನಳ ಮಹಾರಾಜನಿಗೆ ಬಿನ್ನವಿಸು.

'ಬೇರೆಯವರ ದುಃಖವನ್ನು ಪರಿಹರಿಸಿ ಉಪಕಾರ ಮಾಡಿದರೆ ಪುಣ್ಯ ಪ್ರಾಪ್ತಿಯಾಗುವುದೆಂದು ಹಿರಿಯರು ಹೇಳುತ್ತಾರೆ. ಹಂಸರಾಜನೇ, ನೀನೇ ನನಗೆ ಉತ್ತಮ ಬಂಧು. ಸಹಾಯ ಮಾಡು. ವಿರಹದಿಂದ ನೊಂದಿರುವವಳನ್ನು ದುಃಖಕ್ಕೀಡಾಗುವಂತೆ ಮಾಡಬೇಡ. ರಕ್ಷಿಸು' ಎಂದು ಕೇಳಿಕೊಳ್ಳುತ್ತ ವಿರಹದ ನೋವು ನಾಚಿಕೆಗಳಿಂದ ತಲೆತಗ್ಗಿಸಿ ಮಾತು ಮುಂದುವರಿಸಿದಳು 'ವಿರಹಾಗ್ನಿಯಲ್ಲಿ ನೊಂದಿದ್ದೇನೆ. ಆ ತಾಪದಿಂದ ಶರೀರ ಬಾಡಿ ನಲಿವು ಇಂಗಿ ಹೋಗಿದೆ. ಶಕ್ತಿ ಕುಂದಿದೆ. ಹೆಚ್ಚು ಮಾತೇಕೆ? ನಳನೃಪ ತಿಲಕನೇ ನನ್ನ ಪತಿ. ಭೂಲೋಕದ ಇನ್ನಿತರ ಗಂಡಸರೆಲ್ಲ ನನಗೆ ಪಿತೃಸಮಾನರು.'

ದಮಯಂತಿಯ ಆ ನುಡಿಯೊಳಗಣ ಕರುಣ ಪ್ರಮಾಣವನ್ನು ಕಂಡು ಹಂಸವು – ತಾನು ಬಂದಿರುವ ಕಾರ್ಯ ಸಫಲವಾಯಿತೆಂದು ಹರ್ಷಗೊಂಡಿತು. ಅವಳನ್ನು ಹತ್ತಿರ ಕರೆದು ಆತ್ಮೀಯಭಾವದಲ್ಲಿ ಕೊಂಡಾಡುತ್ತ 'ಹೆದರಬೇಡ. ನಿನಗೆ ನಳ ಮಹಾರಾಜನನ್ನು ಪತಿಯನ್ನಾಗಿ ಮಾಡುತ್ತೇನೆ' ಎಂದು ಹೇಳಿತು. ಅವಳಿಗೆ ಅಂತರಂಗದ ಹಲವು ವಿಷಯಗಳನ್ನು ಹೇಳಿ ಸಮಾಧಾನಪಡಿಸಿತು. ಅವಳಿಂದ ಬೀಳ್ಕೊಂಡು ಬೇಗ ಬೇಗ ಮುಂದೆ ಸಾಗಿ ತನ್ನ ಬಳಗವನ್ನು ಕೂಡಿಕೊಂಡಿತು. ನಳನ ಚಿಂತೆಯನ್ನು ಪರಿಹರಿಸಲು ಹಿಂತಿರುಗಿ ಬಂದಿತು.

## ಭೋಗ ಸುಖದರ್ಶನದ ಫಲವಿಂದೀಗಲಹುದು

ಆಗ ನಳಭೂವರನ ಬಲಭಾಗ ಬಲಭುಜ ಮತ್ತು ಬಲಗಣ್ಣು ಅದುರಿದವು. ಅದರ ಫಲವೇನೆಂದು ಬ್ರಾಹ್ಮಣರನ್ನು ಕರೆದು ಕೇಳಿದನು. ಅವರು 'ಇದು ಶುಭ ಸೂಚನೆ. ರತಿಸುಖದ ದರ್ಶನ ಫಲವಿದು' ಎಂದು ಹೇಳುವ ಸಮಯಕ್ಕೆ ರಾಜಹಂಸವು ಪ್ರೀತಿಯಿಂದ ರಾಜನ ಬಳಿಗೆ ಬಂದಿತು. ಅದನ್ನು ನೋಡುತ್ತ ಅದರ ಮುಖ ಕಳೆಯಿಂದಲೇ ನಳನು ದಮಯಂತಿ ತನ್ನನ್ನು ಮೆಚ್ಚಿರಬೇಕೆಂದು ಮನಸ್ಸಿನಲ್ಲಿ ಊಹಿಸಿಕೊಂಡನು. ಪ್ರಕಟವಾಗಿ ಸಂತೋಷದಿಂದ ಹಂಸೆಯನ್ನು ಕೇಳಿದನು.

‘ಹಂಸ ರಾಜನೇ, ಮಂದಗಮನೆ ದಮಯಂತಿಯನ್ನು ನೋಡಿದೆಯಾ? ಏನೆಂದು ಹೇಳಿದಳು? ಅವಳ ಮನದ ಒಳಭಾವವೇನು?’

‘ಮಹಾರಾಜನೇ ಕೇಳು, ಮನಸ್ಸಿನ ಅನುಮಾನವನ್ನು ಬಿಡು. ನಿನ್ನ ಇಷ್ಟಾರ್ಥ ಸಿದ್ಧಿಸಿರುವುದರಿಂದ ಗುಡಿಯ ಕಟ್ಟಿಸು. ಮಾನನಿಧಿಯೇ, ನೀನು ಈ ಹಿಂದೆ ಮಾಡಿದ ಪುಣ್ಯ ಫಲವೋ ಎಂಬಂತೆ ದಮಯಂತಿಯು ಸದಾ ನಿನ್ನನ್ನೇ ನೆನೆಯುತ್ತಿರುತ್ತಾಳೆ. ಅವಳಿಗೆ ಬೇರೆ ಯಾವುದರಲ್ಲೂ ಮನಸ್ಸಿಲ್ಲ.’

‘ಹೌದೇ!’

‘ಹೌದು ಮಹಾರಾಜ. ಆ ಸುಂದರಿಯು ನಿನ್ನ ಮೇಲಿನ ಪ್ರೀತಿಯಿಂದ ಒಲಿದು, ಅಂತರಂಗದಲ್ಲಿ ನಿನಗಾಗಿ ಕಾತರಿಸುತ್ತಿದ್ದಾಳೆ. ಮನ್ಮಥನ ಉಪಟಳದಿಂದ ಕಡು ನೊಂದಿದ್ದಾಳೆ, ಶಕ್ತಿಗುಂದಿದ್ದಾಳೆ. ಆ ತರುಣಿ ನಿನ್ನನ್ನೇ ಹಂಬಲಿಸುತ್ತ – ನಳನೃಪನೇ ತನ್ನ ಪತಿಯೆಂದು ನಂಬಿದ್ದಾಳೆ ಎಂದು ಹೇಳುತ್ತ ದಮಯಂತಿಯ ಪ್ರೀತಿಯ ವಿರಹ ವದನವನ್ನು ನೆನೆದು ಮಾತು ಮುಂದುವರಿಸಿತು ‘ನೃಪತಿಯೆ, ದಮಯಂತಿಯು ನಿನಗೆ ಪತ್ನಿಯಾಗುವಂತೆ ಒಲಿಸಿ ಬಂದಿದ್ದೇನೆ. ನಾನು ಕೊಟ್ಟ ಭಾಷೆ ನೆರವೇರಿತು. ನೀನು ಆ ಲಲನೆಯನ್ನು ಮದುವೆಯಾಗು. ನನ್ನನ್ನು ಹೊರಡಲು ಅನುಮತಿಸು.’

‘ಹಂಸರಾಜ ತಾವು ನನಗಾಗಿ ತುಂಬಾ ಬಳಲಿದಿರಿ. ಕಾಡಿನಲ್ಲಿ ಅಲೆದಾಡಿದಿರಿ. ಕಷ್ಟಕ್ಕೆ ಗುರಿಯಾದಿರಿ. ತಮ್ಮ ಸೇವೆ ಅಪಾರವಾದುದು. ತಾವು ಹೊರಡಿ.’

ಎಂದು ಹೇಳಿ ತುಂಬು ಪ್ರೀತಿ, ಗೌರವ, ಅಭಿಮಾನದಿಂದ ಬೀಳ್ಕೊಟ್ಟನು.

## ಚಿತ್ತಜನು ಪಾತಕನು ವಿರಹವ ಹೊತ್ತಿಸಿದನಿಬ್ಬರಿಗೆ

ಪಾಂಡವತನಯನೇ ಕೇಳು. ರಾಜಹಂಸವು ತನ್ನ ಬಳಗದತ್ತ ಸಾಗಲು ಇತ್ತ ನಳನು ತನ್ನ ನಿಷಧ ನಗರಕ್ಕೆ ಹಿಂತಿರುಗಿದನು. ಅವನ ಮನಸ್ಸಿನಲ್ಲಿ ವಿರಹತಾಪ ಹೆಚ್ಚಲು ಪರಿಚಾರಕರನ್ನು ದೂರ ಕಳುಹಿಸಿದನು. ಆಟ ಕೂಟ, ವಿನೋದ ವೈಭವಗಳಿಂದ ದೂರವಾದನು.

ಆ ಕಡೆ ದಮಯಂತಿ ನಳನ ಯೋಚನೆಯಲ್ಲಿಯೇ ಇದ್ದಳು. ನಳನಿಗೆ ವಿರಹದ ಉರಿ ಹೊತ್ತಿತ್ತು. ಈರ್ವರಿಗೂ ವಿರಹ ಸಂತಾಪವನ್ನುಂಟು ಮಾಡಿದ ಮದನನು ನಿಜವಾಗಿಯೂ ಪಾತಕನು! ಆದರೆ ಆ ಕಾಮನ ತಂದೆ ಚೆನ್ನಿಗರಾಯ ಶ್ರೀಹರಿಯು ಅವರಿಬ್ಬರಿಗೂ ಕರುಣೆ ತೋರಿದ!

# ದಮಯಂತಿ ಸ್ವಯಂವರ

ಧರ್ಮರಾಜನೇ ಕೇಳು. ನಳನ ರೂಪ ಸೌಂದರ್ಯವನ್ನು ಕೇಳಿಯೇ ದಮಯಂತಿಗೆ ಹೀಗಾಯಿತು. ಇನ್ನು ಅವನ ಲಾವಣ್ಯಯುಕ್ತ ಅಂಗಾಂಗದ ಶರೀರವನ್ನು ನೋಡಲು ಅವಳ ವಿರಹತಾಪ ಏನಾಗುವುದೊ! ನಾಲಗೆ ಒಣಗಿ, ಮಂಚದ ಮೇಲೆ ಮಲಗುವುದನ್ನು ಬಿಟ್ಟಳು. ಅವಳ ವಿರಹಾವಸ್ಥೆಯ ಮನೋವ್ಯಥೆಯನ್ನು ಏನೆಂದು ವರ್ಣಿಸಲಿ ಧರ್ಮಜ ಎಂದು ರೋಮಶ ಮುನಿ ನೊಂದು ನುಡಿಯುತ್ತ ಕಥೆ ಮುಂದುವರಿಸಿದರು.

ಲಲನೆಗೆ ನಿದ್ರೆ ಬಾರದಾಯಿತು. ಮನಸ್ಸು ದಿಗ್ಭ್ರಮೆಗೊಂಡಿತು. ತನ್ನ ಸಖಿಯರು ಹತ್ತಿರ ಸುಳಿದಾಡಲು – ನಳನೃಪನು ಬಂದನೆಂದು ಇಣಿಕಿ ನೋಡುವಳು. ಅವನನ್ನು ಕಾಣದೆ ದುಃಖಿಸುವಳು. ಆ ವರ್ತನೆಯನ್ನು ನೋಡಿದ ಸಖಿಯರು ತಮ್ಮ ತಮ್ಮಲ್ಲಿ ಆಲೋಚಿಸಿದರು. ದಮಯಂತಿಯ ವಿರಹ ಹೆಚ್ಚಿದೆ. ಅದನ್ನು ರಾಜನಿಗೆ ತಿಳಿಸಬೇಕೆಂದು ಅವರು ಭೀಮನೃಪನಲ್ಲಿಗೆ ಬಂದರು. 'ನೃಪನೇ ಅಂದು ಆಸ್ಥಾನದಲ್ಲಿ ಕವಿಶ್ರೇಷ್ಠರು ನಳ ಮಹಾರಾಜನನ್ನು ಹೊಗಳಿದರು. ಅದನ್ನು ಕೇಳಿದಂದಿನಿಂದ ದಮಯಂತಿ ವಿರಹತಾಪಕ್ಕೆ ಒಳಗಾಗಿದ್ದಾಳೆ' ಎಂದು ಹೇಳಿದರು.

ಭೀಮನೃಪನು ನಸುನಗುತ್ತಾ ತನ್ನ ಮಗಳ ಯೌವನದ ವಿಕಾಸವನ್ನು ಕೇಳಿದನು. ಅವಳಿಗೆ ತಕ್ಕ ವರ ಯಾರೆಂದು ಯೋಚಿಸಿದನು. ಆಸ್ಥಾನಕ್ಕೆ ಬಂದು ರಾಜರುಗಳಿಗೆ ಓಲೆಗಳನ್ನು ಬರೆಸಿ ಕಳುಹಿಸಿದನು. ಅವರನ್ನು ಬರ ಹೇಳಿ ಡಂಗುರ ಸಾರಿದನು. ರಾಜದೂತರು ಎಲ್ಲ ದಿಕ್ಕುಗಳ ರಾಜರ ನಗರಗಳಿಗೆ ತೆರಳಿದರು.

ಭೀಮನೃಪಾಲನ ಆಜ್ಞೆಯಂತೆ ವಿದರ್ಭ ನಗರವನ್ನು ಶೃಂಗರಿಸಿದರು. ಭಂಡಾರದಿಂದ

ನವ ನವೀನ ವಸ್ತುಗಳನ್ನು ತರಿಸಿದರು. ವಿಸ್ತಾರವಾಗಿರುವ ಬೃಹತ್ತಾದ ವಿವಾಹ ಮಂಟಪ ವನ್ನು ಕಟ್ಟಿದರು.

ಮನೋಹರವಾಗಿ ಕಾಣುವಂತೆ ರಚಿಸಿದ ಆ ಮಂಟಪವು ಹೊಳೆಯುವ ಆನೆಯ ದಂತದ ಕಂಭಗಳಿಂದ ಹಾಗೂ ಚಪ್ಪರ ಮೇಲುಕಟ್ಟಿಗೆ ಹೊದಿಸಿದ ವಸ್ತ್ರದ ಗೊಂಬೆಗಳ ಸಾಲಿನಿಂದ ಶೋಭಾಯಮಾನವಾಗಿತ್ತು. ಓರಣವಾಗಿ ಕಟ್ಟಿದ ತಳಿರು ತೋರಣಗಳು, ಲೋವೆ (ಚಾವಣಿಯ ಚೌಕಟ್ಟು)ಗಳಲ್ಲಿ ತೂಗು ಹಾಕಿದ ಅರಳಿಯ ಎಲೆಯ ಆಕಾರದ ಒಡವೆ, ಚಪ್ಪರದ ಸುತ್ತಲೂ ಕಟ್ಟಿದ ಬಿಳಿಯ ಮುತ್ತಿನ ಹಾಗೂ ಹವಳದ ಕೆಂಪು ಸರಗಳು, ಮೇಲುಗಟ್ಟಿಗೆ ತೂಗು ಹಾಕಿದ ಬಿಳಿಯ ಚೌರಿ (ಮಂಟಪದ ಅಲಂಕಾರಕ್ಕಾಗಿ ಕಟ್ಟುವ ಕುಚ್ಚು, –ಗೊಂಡೆ)ಗಳಿಂದ ಅದು ಕಂಗೊಳಿಸುತ್ತಿತ್ತು.

ವಿದರ್ಭ ನಗರದ ಅಚ್ಚುಕಟ್ಟಾದ ವಿಶಾಲ ಬೀದಿಗಳನ್ನು ಗಂಧದ್ರವ್ಯಗಳಿಂದ ಸಾರಿಸಿ, ಕಸ್ತೂರಿ ಪನ್ನೀರನ್ನು ಚಿಮುಕಿಸಿದ್ದರು. ಗೋಡೆಗಳ ಮೇಜುಕಟ್ಟನ್ನು ಕುಂಕುಮ ವರ್ಣದಿಂದ ಸಿಂಗರಿಸಿದ್ದರು. ಕೇರಿ ಕೇರಿಯಲ್ಲಿ ತಳಿರು ತೋರಣಗಳಿಂದ ಶೃಂಗಾರಗೊಂಡು ಗುಂಪಾಗಿ ಕೂಡಿದ ವೇಶ್ಯೆಯರಿಂದ ಆ ನಗರ ಮೆರೆಯುತ್ತಿತ್ತು. ಅಲ್ಲಿಗೆ ಮಾಳವ, ಆಂಧ್ರ, ಚೋಳ, ಕರ್ಣಾಟ, ಸೌರಾಷ್ಟ್ರ, ನೇಪಾಳ, ಘೂರ್ಜರ, ಸಿಂಧು ಮುಂತಾದ ದೇಶಗಳ ರಾಜರು ಆಗಮಿಸಿದರು.

ಭೂಲೋಕದಲ್ಲಿ ಕ್ಷಿತಿಜದವರೆಗೆ ಇರುವ ರಾಜರು, ಬ್ರಾಹ್ಮಣರು, ಸಿದ್ಧರು, ಪಂಡಿತರು, ಸಜ್ಜನರು, ಜಟ್ಟಿಗಳು, ಸಚಿವರು, ಋಷಿಶ್ರೇಷ್ಠರು, ಕವಿಗಳು, ನಟರು, ಗಾಯಕರು, ವಿದ್ಯಾಧರರು (ದೇವತೆಗಳಲ್ಲಿ ಒಂದು ವರ್ಗ ಮತ್ತು ಆ ವರ್ಗಕ್ಕೆ ಸೇರಿದವರು), ಜ್ಯೋತಿಷಿಗಳು ಅಲ್ಲಿ ಅಪಾರ ಸಂಖ್ಯೆಯಲ್ಲಿ ಸೇರಿದ್ದರು.

* * *

ಅದೇ ಸಮಯಕ್ಕೆ ನಾರದ 'ಹರಿ! ವಾಸುದೇವಾ!' ಎನ್ನುತ್ತ ತನ್ನ ಸುಂದರ ಕರಗಳಿಂದ ವೀಣೆ ನುಡಿಸುತ್ತ ಮುನಿಸಮೂಹದೊಂದಿಗೆ ದೇವೇಂದ್ರನ ಸಭೆಯನ್ನು ಪ್ರವೇಶಿಸಿದನು. ಅಮರೇಂದ್ರನು ಎದ್ದು ನಾರದ ಮುನಿಯನ್ನು ಸಂತೋಷದಿಂದ ಬರಮಾಡಿಕೊಂಡನು. ಸಿಂಹಾಸನದಲ್ಲಿ ಕುಳ್ಳಿರಿಸಿದನು. ಕೈಮುಗಿದು ಪ್ರಾರ್ಥಿಸಿದನು,

'ಪೂಜ್ಯರೇ, ಎಲ್ಲಿಂದ ಆಗಮಿಸಿದಿರಿ? ಭೂಲೋಕದ ರಾಜರುಗಳಲ್ಲಿ ಸತ್ಯಧರ್ಮ ಸುಶೀಲರಾದ ಉತ್ತಮರು ಯಾರಿದ್ದಾರೆ? ಅವರ ಗುಣ ವಿಶೇಷವೇನು? ವಿವರವಾಗಿ ತಿಳಿಸಿ.'

‘ಅಮರಪತಿಯೇ, ಭೂಲೋಕದಲ್ಲಿ ಅನೇಕ ಜನ ಅರಸರಿದ್ದಾರೆ. ಅವರಲ್ಲಿ ವಿದರ್ಭ ಪುರಪತಿ ಭೀಮನೃಪನಿಗೆ ಕಮಲಮುಖಿಯಾದ ದಮಯಂತಿಯೆಂಬ ಸುಂದರ ಮಗಳಿದ್ದಾಳೆ. ಅವಳು ಯೌವನಭರಿತೆಯಾಗಿರುವುದರಿಂದ ಸ್ವಯಂವರ ಏರ್ಪಟ್ಟಿದೆ. ಭೂಮಿಯ ಉದ್ದಗಲದ ರಾಜರು ಅಲ್ಲಿಗೆ ಆಗಮಿಸುತ್ತಿದ್ದಾರೆ.’

‘ದಮಯಂತಿ ಅಷ್ಟು ಸೌಂದರ್ಯವತಿಯೇ?’

‘ಹೌದು, ದೇವೇಂದ್ರ. ಚೆಲುವೆಯೆಂದರೆ ದಮಯಂತಿ. ಅಲ್ಲಿ ನೆರೆದಿರುವ ಸಮಸ್ತ ರಾಜರ ಬಗ್ಗೆ ಏನು ಹೇಳಲಿ! ಇಡೀ ನಗರ ರಾಜರಿಂದ ಕಿಕ್ಕಿರಿದಿದೆ! ತಡೆಯಿಲ್ಲದಂತೆ ದೇಶ ವಿದೇಶಗಳ ಯಾಚಕರು ಬರುತ್ತಲಿದ್ದಾರೆ! ಆ ಸಂಭ್ರಮದ ವಿವಾಹವನ್ನು ನೋಡಲು ಹೋಗುತ್ತೇವೆ’ ಎಂದು ಹೇಳುತ್ತ ‘ಹರಿ! ವಾಸುದೇವಾ’ ಎಂದು ಜಪಿಸುತ್ತ, ವೀಣೆ ನುಡಿಸುತ್ತ ನಾರದ ಮುನಿಯು ಹಂಸವನ್ನೇರಿ ಹೊರಟುಬಿಟ್ಟರು.

* * *

ಧರ್ಮರಾಜನೇ ಕೇಳು. ನಾರದರ ಮಾತನ್ನು ಕೇಳಿ ಅಮರೇಂದ್ರನು ವಿರಹ ಪೀಡಿತನಾದನು. ದೇವ ಸ್ತ್ರೀಯರನ್ನು ಕರೆದು ‘ನೀವು ದಮಯಂತಿಯನ್ನು ಉಪಚರಿಸಿ, ಅವಳು ನನಗೆ ಒಲಿಯುವಂತೆ ಮಾಡಿ’ ಎಂದು ಹೇಳಿ ಅವರಿಗೆ ಅಮೂಲ್ಯ ವಸ್ತುಗಳನ್ನು ಕೊಟ್ಟು ಕಳುಹಿಸಿದನು.

## ಮುಂದೆ ಮಾರ್ಗದಿ ಸ್ಮರನ ರೂಪಿನ ನೈಷಧನ ಕಂಡರು

ದೇವೇಂದ್ರನು ದಿವ್ಯರಥವನ್ನು ತರಿಸಿದನು. ದಿಕ್ಪಾಲಕರಾದ ಯಮ, ವರುಣ ಮತ್ತು ವಾಯುವನ್ನೂ ಒಡಗೂಡಿ ಅಮರಾವತಿಯಿಂದ ಹೊರಟನು. ಭೂಮಿಗೆ ಇಳಿದು ಬರುವ ಮಾರ್ಗದಲ್ಲಿ ಸ್ಮರನ ರೂಪಿನ ನಿಷಧರಾಜ ನಳನೃಪನನ್ನು ನೋಡಿದರು. ನೋಡಿ ನೋಡುತ್ತ ಒಲ್ಮೆಯುಕ್ಕಿ ಮೆಚ್ಚಿದರು. ಉಚಿತವಾದ ರೀತಿಯಲ್ಲಿ ಅವನಿಗೆ ಕಾಣಿಸಿಕೊಂಡರು.

ರವಿತೇಜದಂತಿರುವ ಮಹಿಮಾವಂತರು ಭೂಮಿಗೆ ಇಳಿಯುತ್ತಿರುವುದನ್ನು ನೋಡಿದ ನಳ ರಥದಿಂದಿಳಿದನು. ಕೈ ಮುಗಿದು ನಿಂತನು. ಹರ್ಷಾನಂದವನ್ನು ಹೊಂದಿದ ಅವರು ರಾಜನನ್ನು ಸೆಳೆದು ಬಿಗಿದಪ್ಪಿಕೊಂಡರು. ಅವನ ಚೆಲುವನ್ನು ಈಕ್ಷಿಸುತ್ತ ನಲಿದರು. ಮನ ಒಲಿದು ಕೊಂಡಾಡಿದರು. ದೇವೇಂದ್ರನು,

‘ಕುಶಲವೇ ನಳನಪ್ಪ. ನೀನು ಚಂದ್ರವಂಶದ ಅರಸ. ಬಾ, ಬಾ ಸಮೀಪ. ವಸುಧಾಧಿಪತಿ ವೀರಸೇನ ಮಹಾರಾಜನು ನಮಗೆ ಉತ್ತಮ ಸ್ನೇಹಿತ’ ಎಂದು ಹೇಳಿ ಮೆಚ್ಚಿಗೆ ಸೂಚಿಸಿ

ಮಾತನ್ನು ಮುಂದುವರಿಸುತ್ತ ನುಡಿದನು 'ನಿನ್ನನ್ನು ಪ್ರೀತಿಯಿಂದ ಬೇಡುವ ಕಾರ್ಯ ಒಂದಿದೆ. ಅದು ನೆರವೇರುವ ಭರವಸೆಯಿಂದ ಬಂದಿದ್ದೇವೆ. ನಿನ್ನನ್ನು ಕಂಡು ನಮಗೆ ಫಲ ಸಿದ್ಧಿಸಿದಂತಾಗಿದೆ. ನಿನ್ನಿಂದ ನಮಗೊಂದು ಉಪಕಾರವಾಗಬೇಕು.'

'ಐರಾವತದ ಮೇಲೆ ಸಂಚರಿಸುವವನೇ ಗಮನವಿಟ್ಟು ಕೇಳು. ನರಮನುಷ್ಯರಾದ ನಾವು ನಿಮಗೆ ಸರಿಸಮಾನರೆ? ಆ ಮಾತಿರಲಿ, ಇಂದು ನಿಮ್ಮ ಚರಣಕಮಲಗಳ ದರ್ಶನವಾದುದೇ ಒಂದು ಹರ್ಷ. ನೀವು ತಿಳಿಸಿದಂತೆ ನಾನು ಮಾಡುತ್ತೇನೆ.'

ಆ ನುಡಿ ಕೇಳಿದ ಶಚಿ ಅರಸನು ನಸುನಗುತ್ತ ನಳನೃಪನಿಗೆ,

'ಭೂಲೋಕದಲ್ಲಿರುವ ತರುಣಿಯರಲ್ಲಿಯೇ ದಮಯಂತಿ ಅತಿ ರೂಪವಂತೆ ಎಂಬುದನ್ನು ಕೇಳಿದೆ. ಅವಳಿಗೆ ಮನಸ್ಸು ಒಲಿಯಿತು. ಅವಳಲ್ಲಿಗೆ ನೀನು ಹೋಗಿ ಪ್ರೀತಿಪೂರ್ವಕವಾಗಿ ಮಾತಾಡಿ, ಅವಳು ನನಗೆ ಅನುಕೂಲೆಯಾಗುವಂತೆ ಮಾಡು. ಹೊರಡು' ಎಂದು ಹೇಳುತ್ತ ಮಾತು ಮುಂದುವರಿಸಿ 'ಈತ ಯಮಧರ್ಮ. ನಾನು ದೇವೇಂದ್ರ. ಈತ ವರುಣ, ಈತ ವಾಯು, ನಮ್ಮ ಮಾತನ್ನು ಮನ್ನಿಸು. ನಮಗೆ ಉಪಕಾರವನ್ನು ಮಾಡು.

'ಈ ಕೆಲಸ ಸಾಧನೆಗಾಗಿ ಈ ಕ್ಷಣವೆ ನಿನಗೆ ನಾವು ಪ್ರೀತಿಯಿಂದ – ಅದೃಶ್ಯವಾಗುವ ವರವನ್ನು ನೀಡಿದ್ದೇವೆ. ನೀನು ಆ ದಮಯಂತಿಯು ನನ್ನನ್ನು ಒಲಿಯುವಂತೆ ಮಾಡು' ಎಂದನು.

## ಆ ಲತಾಂಗಿಯ ಮೇಲೆ ಪರಮ ವಿಶಾಲಮನವಿಹುದು

ದೇವೇಂದ್ರನ ಮಾತನ್ನು ಕೇಳಿ ನಳಮಹಾರಾಜನ ಮನಸ್ಸು ಅಲ್ಲೋಲ ಕಲ್ಲೋಲ ವಾಯಿತು. ದಮಯಂತಿಯು ನನ್ನನ್ನೇ ಪತಿಯೆಂದು ಧ್ಯಾನಿಸುತ್ತಿದ್ದಾಳೆ. ನನಗೂ ಆ ಲತಾಂಗಿಯ ಮೇಲೆ ತುಂಬ ಮನಸ್ಸಾಗಿದೆ. ಹೀಗಿರುವಾಗ ಶಿವ ಶಿವ ಆ ಬಾಲಕಿಯನ್ನು ದೇವೇಂದ್ರನ ಹೆಂಡತಿಯಾಗು ಎಂದು ಯಾವ ನಾಲಗೆಯಿಂದ ಹೇಳಲಿ – ಎಂದು ಮನಸ್ಸಿನಲ್ಲಿಯೇ ಮರುಗಿದನು. ಪ್ರಕಟವಾಗಿ ವಿನಯದಿಂದ 'ದೇವೇಂದ್ರನೇ, ಆ ಮಂದಗಮನೆಯನ್ನು ತಮಗೆ ಒಲಿಯುವಂತೆ ಮಾಡು ಎಂದು ಹೇಳುತ್ತಿರುವಿರಿ. ಆಗದು ಎಂದರೆ ನಿಮಗೆ ಕೋಪ ಬಾರದೆ ಇರದು. ಆದರೆ ಈ ಲೋಕದಲ್ಲಿ ಸ್ತ್ರೀಯರ ಗುಣ ಸ್ವಭಾವವನ್ನು ತಿಳಿಯುವುದು ಅಸಾಧ್ಯ.'

'ನಳಮಹಾರಾಜ ನೀನು ಜಾಣತನದಿಂದ ಕೆಲಸ ಸಾಧಿಸಬೇಕು'.

'ಸುರರಾಜನೇ, ಆ ಯುವತಿಯರು ನಮಗಿಂತ ಕಡು ಜಾಣೆಯರು. ಅವರು

ಯಾವುದೇ ಕೆಲಸವನ್ನು ಪ್ರಯೋಜನವಿಲ್ಲದಂತೆ ಮಾಡಿಬಿಡುವರು. ಕಪಟ ವಿದ್ಯೆಯಿಂದ ಭ್ರಮೆಯನ್ನುಂಟು ಮಾಡುವರು. ನಿತ್ಯ ವ್ಯವಹಾರದಲ್ಲಿ ಸುಳ್ಳಾಡುವರು. ದೇಹ ಅಳಿದರೂ ಅಂತರಂಗದ ಭಾವವನ್ನು ವ್ಯಕ್ತಪಡಿಸುವುದಿಲ್ಲ. ವಿಶಾಲಾಕ್ಷಿಯರ ಹೃದಯವಿದು.'

'ನಳನೇ, ನೀನು ಜನಪಾಲಕ. ನಿನ್ನ ಚತುರ ನಡೆ ನಾನು ಇಷ್ಟಪಡುವೆ.'

'ಓಹ್ ದೇವೇಂದ್ರ, ಅವರು ಕಪಟವನ್ನು ಬಿಡುವುದಿಲ್ಲ. ಚಪಲ ಚಿತ್ತದಿಂದ ತಮ್ಮನ್ನೇ ವಂಚಿಸಿಕೊಂಡು ಮಾತನಾಡುವರು. ರಹಸ್ಯವನ್ನು ಕಾಪಾಡಿಕೊಳ್ಳುವುದಿಲ್ಲ. ಆಪ್ತರ ಒಡವೆಯನ್ನು ಅಪಹರಿಸಿ ಸಾಹಸವನ್ನು ತೋರುವರು.'

'ನಳಮಹಾರಾಜ ನನ್ನದು ಲಲನೆಯ ಬಗೆಗಿನ ಆಸೆ. ನಿನ್ನದು ಅವರ ಸೂಕ್ಷ್ಮಾತಿಸೂಕ್ಷ್ಮ ಮನೋಭಾವಲಹರಿಯ ಶೋಧ. ನನ್ನ ಕಲ್ಪನೆಯ ಆಕಾಂಕ್ಷೆ ನಿನ್ನ ಜೀವನಾನುಭವದ ವಾಸ್ತವದ ಮುಂದೆ ಮೂಕವಾಗುತ್ತಿದೆ.'

## ಸತ್ಯಕ್ಕೆ ಪಾವಕನ ಮುಟ್ಟುವರು

'ಹೆಂಗಸರು ಸಾವನ್ನು ಲೆಕ್ಕಿಸುವುದಿಲ್ಲ. ಮನಸ್ಸಿನಲ್ಲಿ ಸತ್ಯ ಸಂಗತಿಯನ್ನು ಭಾವಿಸುವುದಿಲ್ಲ. ಹುಸಿಯ ಬಗ್ಗೆ ಒಲ್ಮೆದೋರುತ್ತಾರೆ. ಸುಳ್ಳಾಡುತ್ತಾರೆ. ಒಂದು ಕ್ರಮದ ನಡೆಯಿಲ್ಲ. ಸತ್ಯಕ್ಕಾಗಿ ಬೆಂಕಿಯನ್ನು ಮುಟ್ಟುತ್ತಾರೆ. ಅಂತಹವರನ್ನು ಯಾವ ರೀತಿಯಲ್ಲಿ ನಂಬುವುದು?' ಎಂದು ಹೇಳಿ ಸೈನ್ಯವನ್ನು ಅಲ್ಲಿಯೆ ನಿಲ್ಲಿಸಿ, ಹಿಗ್ಗು ಹಿಂಗಿದ ಮನದಲ್ಲಿ ವಿದರ್ಭಕ್ಕೆ ಹೊರಟನು.

ಆ ನಗರವು ರತ್ನಪ್ರಭೆಯ ಸಾಲು ಸಾಲು ಮಹಡಿ ಮನೆಗಳಿಂದ ಬೆಳಗುತ್ತಿತ್ತು. ಕೋಟೆಯು ರಕ್ಷಣೆಯ ಬುರುಜುಗಳಿಂದ ಶೋಭಿಸುತ್ತಿತ್ತು. ಆ ವೈಭವವನ್ನು ನೋಡುತ್ತ ನಳನೃಪನು ನಗರವನ್ನು ಹೊಕ್ಕನು.

## ನಳಭೂವರನದೃಶ್ಯದ ರೂಪಿನಲಿಯೊಳಹೊಕ್ಕನರಮನೆಯ

ಅರಮನೆಯ ಬಾಗಿಲ ಬಳಿ ಬರಲು ಹೆಬ್ಬಾಗಿಲ ಎರಡೂ ಕಡೆ ಎತ್ತರವಾದ ವೇದಿಕೆಗಳಲ್ಲಿ ವೀರಯೋಧರು ಕೈಯಲ್ಲಿ ಆಯುಧಗಳನ್ನು ಹಿಡಿದು ಕಾಯುತ್ತಿದ್ದರು. ಅಲ್ಲಿ ತರುಣಿಯರು ಸಡಗರದಿಂದ ಓಡಾಡುತ್ತಿದ್ದರು. ನಳಮಹಾರಾಜನು ಅವರಿಗೆ ಕಾಣಿಸದಂತಹ ಅದೃಶ್ಯ ರೂಪಿನಲ್ಲಿ ಅರಮನೆಯನ್ನು ಪ್ರವೇಶಿಸಿದನು.

ಆ ಸಮಯದಲ್ಲಿ ದಮಯಂತಿಯು ಸುಂದರ ಚಿತ್ರದ ಬಾಗಿಲುಗಳನ್ನು ಹೊಂದಿದ ಮಹಡಿಯಲ್ಲಿ ತೂಗುಮಂಚದ ಹಾಸಿನ ಮೇಲೆ ಕುಳಿತಿದ್ದಳು. ಪುಷ್ಪಬಾಣನ ಹೊಡೆತಕ್ಕೆ ಒಳಗಾದ ಆ ಚೆಲುವೆ ತನ್ನ ಗೆಳತಿಯರ ಓಲಗದಲ್ಲಿ ನಳನ ಕಥೆಯನ್ನು ಗಮನವಿಟ್ಟು ಕೇಳುತ್ತಿದ್ದಳು.

ಆಗ ಅಲ್ಲಿಗೆ ದೇವೇಂದ್ರ ಕಳುಹಿಸಿದ ಸುರಸುಂದರಿಯರು ಬಂದರು. ತಾವು ತಂದ ಸಕಲ ವಸ್ತುಗಳನ್ನು ದಮಯಂತಿಗೆ ಕಾಣಿಕೆಯಾಗಿ ನೀಡಿ ಕೈಮುಗಿದು ನಿಂತರು. ಅವರನ್ನು ನೋಡಿ ಆಕೆ ಪ್ರಶ್ನಿಸಿದಳು,

'ನೀವು ಎಲ್ಲಿಂದ ಬಂದಿರಿ? ನೀವು ಬಂದ ಕಾರಣವೇನು?'

'ತಾಯೆ ಕೇಳು. ಅಮರೇಂದ್ರನು ನಿಮ್ಮ ಅತಿಶಯ ಚೆಲುವನ್ನು ಕೇಳಿ ಮನ್ಮಥ ಬಾಧೆಗೆ ಒಳಗಾಗಿ ನೊಂದು ನಮ್ಮನ್ನು ಇಲ್ಲಿಗೆ ಕಳುಹಿಸಿದ್ದಾನೆ. ಉಚಿತವಾದ ಭೂಷಣವನ್ನು ತೊಡು. ಸುರರಾಯನಿಗೆ ಸತಿಯಾಗು. ಮರ್ತ್ಯದ ರಾಜರು ಅಮರರಲ್ಲ. ಅವರನ್ನು ನೆಚ್ಚಬೇಡ.' ಎಂದು ಹೇಳುತ್ತ ದಮಯಂತಿಯ ಮನಸ್ಸು ದೇವೇಂದ್ರನಿಗೆ ಒಲಿಯುವಂತೆ ಮಾಡಲು ಆ ರಂಬೆಯರು ನಗುನಗುತ್ತ ಮಾತು ಮುಂದುವರಿಸಿ 'ಈ ಲೋಕದಲ್ಲಿ ಸುರಪದವಿಗಿಂತ ಬೇರೆ ಪದವಿಯುಂಟೆ? ಅಮ್ಮಾ ಆಲೋಚಿಸಿ ನೋಡು. ನರರಿಗೆ ಅದು ಸುಲಭವಾಗಿ ಒದಗುವುದಿಲ್ಲ. ಇದು ನಿನ್ನ ಪುಣ್ಯ. ಸೌಂದರ್ಯ ನಿಧಿಯೆ ಮಾತು ಕೊಡು' ಎಂದರು.

ದಮಯಂತಿಯು ತುಸುಲಜ್ಜೆ, ತುಸು ಕೋಪದಿಂದ ಕೆಂಪಾಗಿ ನೆಲವನ್ನು ಬಲಪಾದದ ಹೆಬ್ಬೆರಳಿನಿಂದ ಕೆದಕುತ್ತ ಮೌನಧಾರಿಯಾದಳು. ಅವಳನ್ನು ತಮ್ಮ ಮಾತಿನಿಂದ ಒಲಿಸಲು ಆ ರಂಬೆಯರು ಮತ್ತೆ ಹೀಗೆ ಹೇಳಿದರು :

'ಈ ಲೋಕದಲ್ಲಿ ಹೂ ಕಂಪಿನೆಡೆಗೆ ತುಂಬಿಗಳು ಒಲಿದು ಹೋಗುತ್ತವೆ. ಹೂ ಅರಳಿ ತುಂಬಿಯ ಸಮೀಪಕ್ಕೆ ಬರುವುದಿಲ್ಲ. ಹಾಗೆ ನೀನು ಅಮರಪತಿಯ ಬಳಿಗೆ ಒಲಿದು ಹೋಗುವಂತಾಗಲು – ಅವನೇ ನಿನ್ನ ಬಳಿಗೆ ಬರುವನು! ಇದು ನಿನ್ನ ಪುಣ್ಯವಲ್ಲವೇ?'

'ಸುರವನಿತೆಯರೇ, ನನ್ನ ಮನಸ್ಸು ಈಗಾಗಲೇ ಒಬ್ಬನಿಗೆ ವಶವಾಗಿದೆ. ಅದನ್ನು ಹಿಂಪಡೆಯಲು ವಿಷ್ಣುವಿಗೂ ಸಾಧ್ಯವಿಲ್ಲ. ದೇವೇಂದ್ರನಿಗೆ ದೇವಾಂಗನೆಯರಿರುವಾಗ ಮನುಜಳಾದ ನಾನು ಪಾವನಳಾಗುವೆನೇ? ಬರಿದೆ ದುರಾಸೆ ನನಗೇತಕ್ಕೆ?' ಎಂದು ದಮಯಂತಿ ಸ್ಪಷ್ಟವಾಗಿ ಹೇಳಲು ಆ ಸುರಸತಿಯರು ಹಿಂದಿರುಗಿದರು.

ಅನಂತರ ನೃಪತಿಲಕನಾದ ನಳನು ಅಲ್ಲಿಗೆ ಬಂದು ತನ್ನ ಸಹಜ ರೂಪದಲ್ಲಿ ರಾಜತೇಜದಿಂದ ಹೊಳೆಯುತ್ತ ನಿಂತನು. ಅವನನ್ನು ನೋಡಿದ ದಮಯಂತಿ ಅವನು ಮನ್ಮಥನೋ, ನಳನೋ, ನಳಕೂಬರನೋ, ಜಯಂತನೋ ಎಂದು ವಿಸ್ಮಯಗೊಂಡಳು. ಅತ್ಯಾನಂದದಿಂದ ಎದ್ದು ಇತರ ನಾರಿಯರೊಂದಿಗೆ ಸ್ವಾಗತಿಸಿದಳು. ವಿನಯದಿಂದ ಕೈ ಮುಗಿದು ಸಿಂಹಾಸನದ ಮೇಲೆ ಕುಳ್ಳಿರಿಸಿದಳು. ಮುತ್ತುರತ್ನಗಳನ್ನು ಮುದದಿಂದ

ಕಾಣಿಕೆಯಾಗಿ ನೀಡಿದಳು. ಅಲ್ಲಿದ್ದ ಕೆಳದಿಯರ ಗುಂಪನ್ನು ಬದಿಗೆ ಸರಿಸಿ, ಮೆಲ್ಲನೆ ಮಧುರವಾಗಿ ಮಾತಾಡಿದಳು.

'ನೀವು ಯಾರು? ಎಲ್ಲಿಂದ ಬಂದಿರಿ? ಬಂದ ಕಾರಣವೇನು? ನಮ್ಮ ರಾಜ್ಯದಲ್ಲಿ ನೀವು ಹೇಗೆ ಹೊಕ್ಕು ಬಂದಿರಿ? ಇಲ್ಲಿಗೆ ಒಂದು ಗಂಡು ನೊಣವು ಬರಲು ಸಾಧ್ಯವಿಲ್ಲ! ಹಾಗಿರುವಾಗ ಇಲ್ಲಿಗೆ ಬಂದಿರುವ ನೀವು ಅದ್ಭುತ ವೀರರು' ಎಂದು ಹೇಳುತ್ತ ತುಸು ನಾಚಿ 'ಅತಿ ಸುಂದರರು' ಎಂದು ನುಡಿದು ತಲೆತಗ್ಗಿಸಿದಳು.

ಆಗ ಭೂರಮಣ ನಳನು ನಸುನಗುತ್ತ ವಿನಯದಿಂದ ಹೀಗೆ ಹೇಳಿದನು :

'ತರುಣಿಯೇ ಕೇಳು. ನಾನು ದೇವೇಂದ್ರನು ಕಳುಹಿಸಿರುವ ದೂತ. ನಾರದಮುನಿಯು ನಿನ್ನ ರೂಪು ಲಾವಣ್ಯವನ್ನು ದೇವೇಂದ್ರನಿಗೆ ತಿಳಿಸಿದನು. ಅದನ್ನು ಕೇಳಿದ ಅವನು ವಿರಹದಲ್ಲಿ ಕರಗಿ ಹೋಗಿ, ಮನ್ಮಥನ ಬಾಣದ ಹೊಡೆತಕ್ಕೆ ಈಡಾಗಿ ಇಲ್ಲಿಗೆ ಬಂದಿದ್ದಾನೆ. ಆತನಿಗೆ ನೀನು ಅರಸಿಯಾಗು.'

ಆ ನುಡಿ ಕೇಳಿದ ದಮಯಂತಿ ತಿರಸ್ಕಾರ ಭಾವದಲ್ಲಿ ಮುಖ ತಿರುವಿ ಹೇಳಿದಳು :

'ಎಲ್ಲವನ್ನೂ ತಿಳಿದ ನೀವು ಶ್ರೇಷ್ಠರು. ಇಂತಹ ನುಡಿಯನ್ನು ನೀವು ನನ್ನಲ್ಲಿ ಆಡುವುದು ಉಚಿತವಲ್ಲ. ಅದು ಹಾಗಿರಲಿ; ನನಗೆ ನಳನೃಪತಿಯೇ ಪತಿ. ಈ ಜಗತ್ತಿನಲ್ಲಿ ಅವರಲ್ಲದೆ ನನಗೆ ಬೇರೆ ನಲ್ಲರಿಲ್ಲ. ನೀವು ದೇವತೆ ಅಲ್ಲ. ನಿಮ್ಮ ಹೆಸರೇನು?'

'ತರುಣಿಯೆ ನೀನು ದೂತರಲ್ಲಿ ಕುಲಗೋತ್ರವನ್ನೇಕೆ ಹುಡುಕುವೆ? ಇಂದ್ರನು ಖ್ಯಾತ ಪುರುಷ. ಅವನನ್ನು ಬಯಸುವುದು ನಿನ್ನ ಪುಣ್ಯ. ಈ ಭೂಲೋಕದ ನರರು ಸುರರಿಗಿಂತ ಶ್ರೇಷ್ಠರೇ? ಅವರಲ್ಲಿ ಏಕೆ ಅಷ್ಟೊಂದು ಪ್ರೀತಿ? ಆ ಮನೋಭಾವವನ್ನು ಬಿಡು. ದೇವೇಂದ್ರನ ಕೈ ಹಿಡಿದು ಸುಖವಾಗಿರು' ಎಂದು ಹೇಳುತ್ತ ಅವಳ ಮನಸ್ಸನ್ನು ದೇವೇಂದ್ರನತ್ತ ಸೆಳೆಯಲು ಮಾತು ಮುಂದುವರಿಸಿದನು. 'ಈ ಇಳೆಯಲ್ಲಿಯ ಮರ್ತ್ಯರು, ಸ್ವರ್ಗಲೋಕದ ದೇವತೆಗಳಿಗೆ ಸಮಾನರೇ? ಶ್ರೇಷ್ಠ ಕುಲಗಿರಿಗೆ ನೊರಜುಗಲ್ಲು ಸರಿಗಟ್ಟುವುದೇ? ಆಲೋಚಿಸಿ ನೋಡು. ನಳನೃಪನನ್ನು ನೀನು ಬಯಸಿದರೆ ಅವನು ನಿನಗೆ ಒಲಿಯುವನೇ? ಅವನು ಶ್ರೇಷ್ಠ ರಾಜನೇ? ಅದೂ ಇಲ್ಲ.'

ಆ ನುಡಿ ಕೇಳಿದ ದಮಯಂತಿ ಸಿಟ್ಟಿಗೆದ್ದು ಹೇಳಿದಳು :

'ನಳನು ಚಕ್ರವರ್ತಿಗಳಲ್ಲಿ ಮಾನ್ಯನಾದವನು. ಅವನು ಸತ್ಯಸಂಧ ಮತ್ತು ನಿಧಾನಿ. ಚಂದ್ರವಂಶವನ್ನು ಪಾವನಗೊಳಿಸಿದ ಚಕ್ರವರ್ತಿ. ಆ ನರೇಂದ್ರನಿಗೆ ಯಾವ ಮನು, ಮುನಿ, ರಾಕ್ಷಸ, ದೇವತೆಗಳು ಸರಿಸಮಾನರಲ್ಲ. ಅದಿರಲಿ ನಿಮಗೆ ಈ ಹೀನಕಾರ್ಯದ ಮಾತೇಕೆ ಬೇಕಿತ್ತು?'

'ಸರೋಜ ಮುಖಿಯೇ, ನಾನು ದೂತಕಾರ್ಯ ನಿರ್ವಹಿಸಬೇಕಲ್ಲವೇ?'

## ನಿಷಧಪತಿಯೇ ಪತಿಯೆನುತ ಭಾವಿಸಿದೆ

'ನಿಷಧ ಚಕ್ರವರ್ತಿಯೇ ನನ್ನ ಪತಿಯೆಂದು ಭಾವಿಸಿದ್ದೇನೆ. ಆತ ಕರುಣೆ ತೋರಿ ನನ್ನನ್ನು ಸತಿಯಾಗಿ ಸ್ವೀಕರಿಸಿದರೆ ಒಳಿತು. ಹಾಗಾಗದಿದ್ದರೆ ಅವನಿಗಾಗಿ ಪ್ರಾಣವನ್ನೇ ಕೊಡುವೆನು. ನನ್ನ ಮನೋಭಿಲಾಷೆ ಫಲದಾಯಕವಾಗಲಿ. ಇದೇ ನನ್ನ ಸಂಕಲ್ಪ' ಎಂದು ಹೇಳುತ್ತ ಹೊಮ್ಮಿದ ಕಣ್ಣೀರನ್ನು ಬೆರಳ ತುದಿಯಿಂದ ಒರಸಿಕೊಂಡಳು.

ಅದನ್ನು ನೋಡುತ್ತ ನಳನ ಅಂತಃಕರಣ ಕರಗಿತು. ಅವಳ ದೃಢಭಾವಕ್ಕೆ ಅವನಲ್ಲಿ ಕರುಣಲತೆ ಕುಡಿದೋರಿತು. ತಕ್ಷಣ ಹೇಳಿದ :

'ಸರಸಿಜಾನನೆಯೇ ಕೇಳು. ನಾನೇ ಧರಣಿಪತಿ ನಳ'.

ಆ ನುಡಿ ಕಿವಿಗೆ ಬಿದ್ದ ತಕ್ಷಣ ದಮಯಂತಿ ನಾಚಿ ನೀರಾದಳು. ತಲೆತಗ್ಗಿಸಿ ಹೇಳಿದಳು :

'ದೇವಲೋಕದವರು ಕುಟಿಲವಿದ್ಯರು. ಅನೇಕ ಮಾಯೆಗಳನ್ನು ತಿಳಿದವರು. ಈ ಲೋಕದ ನಾವು ಪಾಮರರು. ನಾವು ನಿಮ್ಮನ್ನು ನಂಬುವುದು ಹೇಗೆ? ನನ್ನ ಮನಸ್ಸು ನಂಬುವಂತಹ ಒಂದು ಗುರುತು ತೋರಿಸಿ.'

'ದಮಯಂತಿಯೇ, ನಿನ್ನ ಅಂತರಂಗದ ಮನಸ್ಸನ್ನು ತಿಳಿಯುವ ಸಲುವಾಗಿ ನಾನು ದೇವತೆಯೆಂದು ಹೇಳಿದೆ. ಇದರಲ್ಲಿ ತಪ್ಪೇನಿದೆ? ನಿನಗೆ ಸಂಶಯವೇಕೆ? ರಾಯಭಾರಕ್ಕಾಗಿ ನಿನ್ನ ಬಳಿಗೆ ಹಂಸೆಯನ್ನು ಕಳುಹಿಸಿದೆ. ನೀನು ಇದನ್ನು ಅರಿತು ನನ್ನನ್ನು ನಂಬು.'

ಅದನ್ನು ಕೇಳಿದ ತಕ್ಷಣ ದಮಯಂತಿಯ ಶರೀರ ಪುಳಕಗೊಂಡಿತು. ಹರ್ಷ ಹೊಮ್ಮಿಬರಲು ತನ್ನ ಸಖಿಯರೊಂದಿಗೆ ಮರೆಯಾದಳು.

ನಳನು ಅರಮನೆ ಬಿಟ್ಟು ವಿರಹದಿಂದ ಬಳಲುತ್ತಿರುವ ದೇವೇಂದ್ರನಿದ್ದ ಸ್ಥಳಕ್ಕೆ ಬೇಗ ಬಂದನು. ಇಂದ್ರ, ವಾಯು, ಯಮ, ವರುಣರಿಗೆ ಭಯಭೀತಿಯಿಂದ ನಮಸ್ಕರಿಸಿದನು. ದಮಯಂತಿ ಹೇಳಿದ ಮಾತನ್ನು ವಿವರಿಸಿದನು. ಆಗ ಅವರು 'ನಿನ್ನಲ್ಲಿ ಯಾವುದೇ ಮೋಸವಿಲ್ಲ. ಈ ಬಗ್ಗೆ ಈಗಾಗಲೇ ದೇವಾಂಗನೆಯರಿಂದ ಕೇಳಿದ್ದೇವೆ' ಎಂದು ಭಯಗೊಂಡಿದ್ದ ನಳನನ್ನು ಸಂತೈಸಿದರು.

'ಸ್ತ್ರೀಯ ಕಪಟ ಚಿತ್ತವನ್ನು ತಿಳಿಯಲು ಯಾರಿಗೆ ತಾನೆ ಸಾಧ್ಯ. ನೀನು ನಮಗಾಗಿ ಬಳಲಿದೆ' ಎಂದು ಹೇಳಿ ಉಪಚಾರದ ಮಾತುಗಳನ್ನಾಡಿ ಆಭರಣಗಳನ್ನು ನೀಡಿ ಬೀಳ್ಕೊಟ್ಟರು.

## ನಾಲ್ವರು ನಳನ ರೂಪನು ತಾಳ್ದರು

ಅನಂತರ ಅವರು ತಮ್ಮಲ್ಲಿಯೇ ಮುಂದಿನ ಕಾರ್ಯದ ಬಗ್ಗೆ ಆಲೋಚಿಸಿದರು. ದಮಯಂತಿಯನ್ನು ಒಲಿಸಲು ನಳನ ರೂಪವನ್ನು ಧರಿಸುವುದೇ ಸೂಕ್ತವೆಂದು ಎಲ್ಲರೂ ಅವನ ರೂಪ ಹೊಂದಿದರು.

ಅತ್ತ ವಿದರ್ಭ ನಗರಿಗೆ ಒಂದು ಕಡೆಯಿಂದ ರಾಜಾಧಿರಾಜರು ಸಂಭ್ರಮದಿಂದ ಬರುತ್ತಿದ್ದರೆ, ಮತ್ತೊಂದು ಕಡೆಯಿಂದ ಸುಜನರು, ಸಿದ್ಧರು, ಕಿನ್ನರರು, ಗುಹ್ಯಕರು, ಗರುಡರು, ಗಂಧರ್ವಾದಿ ದೇವತೆಗಳು ಬರುತ್ತಿದ್ದರು.

ಅಸಂಖ್ಯಾತ ರಾಜರುಗಳು ತಮ್ಮ ಚತುರಂಗಸೇನೆಯೊಡನೆ ಅಲ್ಲಿ ನೆರೆದರು. ಶಂಖ, ಮೃದಂಗ, ತಮಟೆ, ದುಂದುಭಿ, ಭೇರಿ, ನಿಸ್ಸಾಳ (ಒಂದು ಬಗೆಯ ಚರ್ಮವಾದ್ಯ)ಗಳು ಮೊಳಗಿದುವು. ಭೀಮನೃಪನು ಆ ರಾಜರ ಸ್ಥಾನಮಾನಕ್ಕೆ ತಕ್ಕಂತೆ ಅವರನ್ನು ಉಚಿತ ರೀತಿಯಲ್ಲಿ ಸ್ವಾಗತಿಸಿ ಉಪಚರಿಸಿದನು. ಸಭೆಯಲ್ಲಿ ಅವರವರ ಯೋಗ್ಯತೆಯ ಅನುಸಾರವಾಗಿ ಮಾನ ಸನ್ಮಾನಗಳನ್ನು ಮಾಡಿದನು.

ತಾಳಮದ್ದಳೆ, ರಸಭರಿತ ನೃತ್ಯ ಪ್ರದರ್ಶನ, ಇಂಪಾದ ಸಂಗೀತ ಗೋಷ್ಠಿ, ಗದ್ಯಪದ್ಯಗಳ ವಾಚನ, ಸಾಹಿತ್ಯ ಚರ್ಚೆ, ಹಾಸ್ಯ ವಿನೋದ ಕಾರ್ಯಕ್ರಮಗಳು ಅಲ್ಲಿ ವಿವಿಧ ಸ್ಥಳಗಳಲ್ಲಿ ನಡೆಯುತಿದ್ದವು.

ಅಂತಃಪುರದಲ್ಲಿ ಹೆಂಗಸರು ದಮಯಂತಿಗೆ ಎಣ್ಣೆಯನ್ನು ಒತ್ತಿದರು. ಸೋಬಾನೆ ಹಾಡುತ್ತ ಉಲ್ಲಾಸ ಹೊಮ್ಮಿಸಿದರು. ಪರಿಮಳ ದ್ರವ್ಯಗಳನ್ನು ಲೇಪಿಸಿ ನಲಿಯುತ್ತ ಅವಳನ್ನು ಸ್ನಾನಗೃಹಕ್ಕೆ ಕರೆದೊಯ್ದರು. ಚಿನ್ನದ ಕಡಾಯಕ್ಕೆ ಪನ್ನೀರು ಬೆರಸಿದರು. ಅದನ್ನು ಮೊಗೆ ಮೊಗೆದು ಅವಳಿಗೆ ಎರೆದರು. ಅನಂತರ ಪರಿಮಳ ಗಂಧಚಂದನವನ್ನು ಲೇಪಿಸಿದರು. ಪಟ್ಟೆ ಪೀತಾಂಬರಗಳನ್ನು ಉಡಿಸಿ, ಹೊಳೆವ ಹೊನ್ನ ಒಡವೆಗಳನ್ನು ತೊಡಿಸಿ ಶೃಂಗರಿಸಿದರು. ಆಗ ದಮಯಂತಿ ಅಧಿಕ ತೇಜದಿಂದ ಕಂಗೊಳಿಸುತ್ತಿದ್ದಳು.

## ಬಂದಳು ಸಿತಾಬ್ಜಕೆ ಲಕ್ಷ್ಮಿಯಂದದಲಿ

ದಮಯಂತಿಯನ್ನು ಹೆಂಗಸರು ಬಳಸಿ ನಿಂತರು. ಸೇವಕಿಯರು ಸಂಚಿ, ಚಾಮರ, ಕಲಶಗಳನ್ನು ಹಿಡಿದುಕೊಂಡಿದ್ದರು. ಎಡಬಲದಲ್ಲಿ ಕಂಚುಕಿಗಳು ಬಿರುದಾವಳಿಯನ್ನು ಹೇಳಿ ಹೊಗಳುತ್ತಿದ್ದರು. ಆ ವೈಭವಪೂರ್ಣ ಸಂಭ್ರಮದಲ್ಲಿ – ಶ್ರೀ ಲಕ್ಷ್ಮಿಯು ಬೆಳ್ದಾವರೆಗೆ ಬರುವ ರೀತಿಯಲ್ಲಿ – ವಿವಾಹ ಮಂಟಪಕ್ಕೆ ಬಂದಳು.

ಬೊಗಸೆ ಕಣ್ಣು, ಚೆಲುವಾದ ಸಿರಿಮುಡಿ, ತೆಳುನಾಡು, ಹೊನ್ನ ಕಳಸದ ಸ್ತನಗಳಿಂದ

ಕೂಡಿ; ವೈಯ್ಯಾರದ ಉಡುಗೆಯಲ್ಲಿ, ಸಿರಿಯ ಸಡಗರದಲ್ಲಿ; ಝಣ ಝಣತ್ಕಾರದ ನಿಧಾನ ನಡೆಯಲ್ಲಿ ದಮಯಂತಿ ನಡೆದು ಬರುವಾಗ ತುಸು ಬೆವರಿಡುತ್ತಿದ್ದಳು.

## ನೀ ಹಾಯ್ಕು ಮನವಿದ್ದವನ ಕೊರಳಿಗೆನುತ್ತ ಕೊಟ್ಟನು ಪುಷ್ಪ ಮಾಲಿಕೆಯ

ಮಗಳು ಆಗಮಿಸುತ್ತಿದ್ದಂತೆ ಭೀಮನೃಪನು 'ಮಗಳೇ ನಾನಾರತ್ನಗಳಿಂದ ಪ್ರಕಾಶಿಸುವ ಕಿರೀಟಗಳನ್ನು ಧರಿಸಿದ ಅನೇಕ ರಾಜರುಗಳು ಇಲ್ಲಿ ಸಿಂಹಾಸನಗಳಲ್ಲಿ ಆಸೀನರಾಗಿದ್ದಾರೆ. ಹೀಗೆ ಸಾಲು ಸಾಲಾಗಿ ಕುಳಿತಿರುವ ಈ ರಾಜರುಗಳಲ್ಲಿ ನಿನ್ನ ಮನಸ್ಸಿಗೆ ಬಂದವನ ಕೊರಳಿಗೆ ಈ ಪುಷ್ಪಮಾಲೆಯನ್ನು ತೊಡಿಸು' ಎಂದು ಹೇಳಿ ಹೂವಿನ ಸರವನ್ನು ಕೊಟ್ಟನು.

ದಮಯಂತಿಯು ಕೈಯಲ್ಲಿ ಹೂಮಾಲೆ ಹಿಡಿದು ನೃಪ ಸಭೆಯನ್ನು ಪ್ರವೇಶಿಸಿದಳು. ಅವಳ ಗೆಳತಿಯರು ಪ್ರೀತಿ ಉತ್ಸಾಹದಿಂದ ಆ ರಾಜರುಗಳೆಲ್ಲರ ಪರಿಚಯ ಮಾಡುತ್ತಿದ್ದರು. ಅವರನ್ನು ಅವಳು ನಾಚುತ್ತ ನೋಡಿದಳು. ಆ ಸಂಭ್ರಮವನ್ನು ನೋಡುವ ಕುತೂಹಲದಿಂದ ಮುತ್ತಿದ ಜನಸಮೂಹವನ್ನು ಕೈಯಲ್ಲಿ ಕೋಲುಹಿಡಿದ ರಾಜಭಟರು ತಡೆದು ನಿಲ್ಲಿಸಿದರು.

ಆ ಕೆಳದಿಯರು 'ಈತ ಮಾಳವ ದೇಶದ ರಾಜ, ಈತ ಮಗಧನೃಪ, ಈತ ಮತ್ಸ್ಯರಾಜ, ಈತ ಕುರುರಾಜ, ಈತ ಚೋಳ, ಈತ ಸಿಂಧು, ಈತ ನೀಲ, ಈತ ಕಳಿಂಗ, ಈತ ಕುಂತಳ ರಾಜ ಈ ಕಡೆಗೆ ದೇವೇಂದ್ರನ ಓಲಗವಿದೆ ನೋಡು' ಎಂದು ತೋರಿಸಿದರು. ದಮಯಂತಿ ಅವರನ್ನು ನೋಡುತ್ತ ಸಾಗುವಾಗ ಆ ರಾಜರಲ್ಲಿ ಕೆಲವರು – ನನ್ನನ್ನು ಒಲಿದಿದ್ದಾಳೆಂದು; ಇನ್ನು ಕೆಲವರು ಸನ್ನೆ ಮಾಡಿದಳೆಂದು; ಮತ್ತೆ ಕೆಲವರು ಕಳ್ಳನೋಟದಿಂದ ನನ್ನನ್ನು ನೋಡಿದಳೆಂದು; ಹಲವರು ಹುಬ್ಬಿನಿಂದ ಸಂಜ್ಞೆ ಮಾಡಿದಳೆಂದು; ಇನ್ನು ಹಲವರು ಓರೆನೋಟದಿಂದ ತನ್ನನ್ನು ನೋಡಿದಳೆಂದು – ತಮ್ಮ ಭಾವಕ್ಕೆ ತಕ್ಕಂತೆ ಬಿಂಕದ ಸವಿ ನುಡಿಗಳನ್ನು ಹೇಳಿಕೊಂಡರು.

ದಮಯಂತಿಯು ನಳ ರೂಪಿನಲ್ಲಿರುವ ನಾಲ್ಕು ಜನರನ್ನು ಕಂಡು 'ಇದು ಮಾಯಾಜಾಲ. ಇವರ ನಿಜ ಸಂಗತಿ ಏನೆಂದು ನಾನು ತಿಳಿಯೆ' ಎಂದು ಹೇಳುತ್ತ ವಾಯುವೇಗದಿಂದ ಅಂತಃಪುರಕ್ಕೆ ಬಂದಳು.

ದಮಯಂತಿಯು ಹಾಗೆ ಚಕ್ರವರ್ತಿಗಳನ್ನು ಉಪೇಕ್ಷಿಸಿ ಬಂದುದಕ್ಕೆ ಆತಂಕಗೊಂಡ ಭೀಮರಾಜನು ಓಡೋಡಿ ಮಗಳ ಬಳಿಗೆ ಬಂದನು. ಅವಳು ಹಾಗೆ ಬಂದ ಕಾರಣವನ್ನು – ಕಾಡಿಸಿ ಪೀಡಿಸಿ, ಒಲ್ಮೆಯಿಂದ ಒತ್ತಾಯ ಮಾಡಿ ಕೇಳಿದನು. ಅವಳು ಇಂದ್ರ ಮಾಡಿದ ಎಲ್ಲ ಮೋಸವನ್ನು ವಿವರಿಸಿದಳು. ಆಗ ಚುರುಕು ಬುದ್ಧಿಯ ರಾಜನು ಸರಸ್ವತಿಯನ್ನು ನೆನೆದು ಕೈಮುಗಿದು ಹೀಗೆ ಪ್ರಾರ್ಥಿಸಿದನು :

'ವಾಣಿ ನೀರಜಪಾಣಿ ಬ್ರಹ್ಮನ
ರಾಣಿ ಪನ್ನಗವೇಣಿ ಸುಕೃತ
ಶ್ರೇಣಿ ಸುರನಿಕುರುಂಬ ವಂದಿತೆ ಸತ್ಯಸಂಚಾರಿ
ವಾಣಿ ಸ್ತ್ರೀಕುಲರನ್ನೆ ವರಗೀ
ರ್ವಾಣಿ ರಕ್ಷಿಸು ರಕ್ಷಿಸು.'

ಅವನ ಬಿನ್ನಹಕ್ಕೆ ಮೆಚ್ಚಿ ವಿಷ್ಣುವಿನ ಸೊಸೆ, ಜಗತ್ಪಾವನೆ, ಸುರಾರ್ಚಿತೆ, ಮರೆಹೊಕ್ಕವರಿಗೆ ಆಶ್ರಯ ಕೊಡುವ ಸರಸ್ವತಿ ಅಲ್ಲಿಗೆ ಬಂದು ರಾಜನನ್ನು ಕೇಳಿದಳು,

'ರಾಜನೇ, ಇಂದು ನನ್ನನ್ನು ಏಕೆ ಧ್ಯಾನಿಸಿದೆ? ನನ್ನಿಂದ ಏನಾಗಬೇಕು?'

'ನಿಗಮನುತೆ ಗೀರ್ವಾಣಿಯೇ, ಏನೂ ತಿಳಿಯದ ನಮ್ಮನ್ನು ಕರುಣೆಯಿಂದ ಕಾಪಾಡು. ಅಗಣಿತ ಅರಸರು ನೆರೆದಿರಲು ಸರಿಯಾದ ಆಯ್ಕೆ ನಮಗೆ ಆಗುತ್ತಿಲ್ಲ. ಯಾರೋ ನಾಲ್ಕು ಮಂದಿ ಒಂದೇ ರೂಪಿನಿಂದ ಬೆರಗುಂಟು ಮಾಡಿ ಭಯಭಾವ ಮೂಡಿಸಿದ್ದಾರೆ. ಅದರಿಂದ ಮಗಳ ಮನಸ್ಸು ಕಂಗೆಟ್ಟಿದೆ.'

ರಾಜನ ಆ ನುಡಿಗೆ ಶಾರದೆಯು ನಗುತ್ತ ದಮಯಂತಿಯನ್ನು ಕರೆದು ಉಪಚರಿಸಿ,

'ಕುವರಿಯೇ ಕೇಳು. ಇದು ದೇವ ಮಾಯೆ. ನೀನು ಇಂದ್ರನನ್ನು ಭಜಿಸು' ಎಂದು ಹೇಳಿ ಅಂತರ್ಧಾನಳಾದಳು.

ಸರಸ್ವತಿಯ ನುಡಿಯಂತೆ ದಮಯಂತಿ ಮತ್ತೆ ಸಭೆಗೆ ಬಂದು ಆ ನಾಲ್ವರಿಗೆ ನಮಸ್ಕರಿಸಿ ಪ್ರಾರ್ಥಿಸಿದಳು :

'ದೇವಕುಲ ಸಂಭವರೇ, ನನ್ನನ್ನು ತಾವು ಮಗಳೆಂದು ಭಾವಿಸಿ, ರಕ್ಷಿಸಿ. ಪಾವನರಾದ ತಾವು ಯುವತಿಯಾದ ನನ್ನ ಮೇಲೆ ಕೃಪೆ ಮಾಡಿ.'

## ದೇವದುಂದುಭಿ ಮೊಳಗಲರಸನ ಕೊರಳಿಗಿಟ್ಟಳು ಪುಷ್ಪ ಮಾಲಿಕೆಯ

ಕೂಡಲೇ ಯಮ, ವಾಯು, ವರುಣ ಮತ್ತು ಇಂದ್ರ ತಮ್ಮ ಮಾರುವೇಷವನ್ನು ತೊರೆದರು. ದೇವೇಂದ್ರ ದಮಯಂತಿಯನ್ನು ಮೆಚ್ಚಿ ಕೊಂಡಾಡಿ ನಳನೃಪನನ್ನು ಕರೆಸಿದನು. ಹೂಮಳೆ ಸುರಿಸಿದನು. ದೇವ ದುಂದುಭಿಯು ಮೊಳಗಿತು. ದಮಯಂತಿಯು ಪುಷ್ಪಮಾಲಿಕೆಯನ್ನು ನಳನ ಕೊರಳಿಗೆ ಹಾಕಿದಳು.

ಭೀಮನೃಪನು ಸಂತೋಷದಿಂದ ಮುನಿಗಳನ್ನು ಕರೆಸಿದನು. ಅವರು ಸತಿ ಪತಿಯರಿಗೆ ಹರಸಿ ಮಂಗಳಾಕ್ಷತೆಯನ್ನು ತಳಿದರು. ಬ್ರಾಹ್ಮಣರ ಅನುಮತಿಯಿಂದ ಭೀಮರಾಜನು ನಳದಮಯಂತಿಯ ಧಾರಾಮಹೋತ್ಸವವನ್ನು ನೆರವೇರಿಸಿದನು. ಮುತ್ತೈದೆಯರು

ಶೋಬಾನೆಗಳನ್ನು ಹಾಡಿದರು. ದೇವಾಂಗನೆಯರು ವಧು ವರರಿಗೆ ಮಂಗಳಾರತಿ ಎತ್ತಿದರು. ಋಷಿಮುನಿಗಳು 'ತುಂಗ ವಿಕ್ರಮನಾಗು' ಎಂದು ಆಶೀರ್ವದಿಸಿದರು. ದೇವೇಂದ್ರನು ಮನೋಹರವಾದ ವಸ್ತ್ರಾಭರಣಗಳನ್ನು ಕೊಟ್ಟನು. ಭೀಮನೃಪನಿಂದ ಯುಕ್ತ ಸತ್ಕಾರ ಪಡೆದು ದೇವಾಂಗನೆಯರೊಡನೆ ದೇವಲೋಕಕ್ಕೆ ಹೋದನು.

ಅರಸ ಧರ್ಮರಾಜನೇ ಕೇಳು. ವಿವಾಹಾನಂತರ ಐದನೆಯ ದಿನದಲ್ಲಿ ಕೊಪ್ಪರಿಗೆಯಲ್ಲಿ ಪನ್ನೀರು ತುಂಬಿಸಿದರು. ಅದಕ್ಕೆ ಕುಂಕುಮ ಬೆರೆಸಿದರು. ಎರಡೂ ಕಡೆಯ ತರುಣಿಯರು ಓಕುಳಿಯನ್ನಾಡಿದರು. ಓಕುಳಿಯ ಪರಿಮಳ ಭೂಮಿಯ ಎಲ್ಲ ಕಡೆ ಪಸರಿಸಿತು. ದೇವತೆಗಳು ನಲಿದಾಡಿದರು. ಭೀಮನೃಪನು ತನ್ನ ಬಂಧು ಬಾಂಧವರನ್ನು, ರಾಜರನ್ನು, ಮಂತ್ರಿಗಳನ್ನು, ಮುನಿಮುಖ್ಯರನ್ನು, ಸುಗಾಯಕರನ್ನು, ಪಂಡಿತರನ್ನು, ಬ್ರಾಹ್ಮಣರನ್ನು, ಭಿಕ್ಷುಕರನ್ನು ಹರ್ಷಗೊಳ್ಳುವಂತೆ ಸನ್ಮಾನಿಸಿದನು. ಅವರಿಗೆ ಆನೆ, ಕುದುರೆ, ವಸ್ತ್ರಾಭರಣಗಳನ್ನು ನೀಡಿ ಸತ್ಕರಿಸಿದನು.

## ನಳಭೂವರನು ನಿಜಸತಿಸಹಿತ ಹೊಕ್ಕನು ನಿಷಧ ಪಟ್ಟಣವ

ವಿದರ್ಭ ರಾಜ ಭೀಮನೃಪನು ತನ್ನ ಅಳಿಯನನ್ನು ರಾಜೋಪಚಾರದಿಂದ ಗೌರವಿಸಿದನು. ಮಗಳಿಗೆ ಹೊಳೆವ ರತ್ನಾಭರಣಗಳು ತುಂಬಿದ ಪೆಟ್ಟಿಗೆಯನ್ನು, ಚತುರಂಗ ಸೇನೆಯನ್ನು, ಒಡನಾಟಕ್ಕೆ ಲಲನೆಯರನ್ನು ಬಳುವಳಿಯಾಗಿ ಕೊಟ್ಟನು. ನಳಮಹಾರಾಜನು ತನ್ನ ಸೈನ್ಯದೊಂದಿಗೆ ಮಂಗಳ ಪಾಠಕರ ಗುಂಪಿನೊಂದಿಗೆ ನಿಷಧ ರಾಜ್ಯಕ್ಕೆ ಪ್ರಯಾಣ ಬೆಳೆಸಿದನು.

ನಳಮಹಾರಾಜನು ದಮಯಂತಿಯೊಂದಿಗೆ ಶುಭ ಮುಹೂರ್ತದಲ್ಲಿ ನಿಷಧ ನಗರವನ್ನು ಪ್ರವೇಶಿಸಿದನು. ಆಗ ಶಂಖ, ಮೃದಂಗ, ಭೇರಿ, ದುಂದುಭಿ, ನಿಸ್ಸಾಳದ ಮಂಗಳ ಘೋಷ ಮೊಳಗಿತು. ನಳನೃಪನು ವೈಭವೋತ್ಸಾಹದಿಂದ ಅರಮನೆಗೆ ನಡೆದನು. ಪ್ರಜೆಗಳೆಲ್ಲ ಸಂತೋಷದಿಂದ ಕುಣಿದು ಸಂಭ್ರಮಿಸಿದರು. ಎಲ್ಲರೊಂದಿಗೆ ಕೂಡಿ ಸಂಭ್ರಮಿಸುತ್ತ ಸಿಂಹಾಸನವನ್ನು ಏರಿದನು. ಇಂದುಮುಖಿಯಾದ ದಮಯಂತಿಯೊಡನೆ ಪ್ರಜೆಗಳನ್ನು ಪ್ರೀತಿಯಿಂದ ಕಾಣುತ್ತ ರಾಜ್ಯವಾಳಿದನು.

ನಳನೃಪನ ರಾಜ್ಯದ ಸಿರಿಸಂಪತ್ತು ವೃದ್ಧಿಸಿತು. ಸಪ್ತದ್ವೀಪದ ರಾಜರುಗಳು ತಲೆಬಾಗಿ ಅವನ ಪಾದಕಮಲಗಳಿಗೆ ಕಾಣಿಕೆಗಳನ್ನು ಅರ್ಪಿಸುತ್ತಿದ್ದರು. ಅವನ ಕೀರ್ತಿ ಮೂರು ಲೋಕಗಳಿಗೆ ಹಬ್ಬಿತು.

ನಳ ಚಕ್ರೇಶನಿಂದ ಅವನ ಸತಿ ದಮಯಂತಿಯು ಒಬ್ಬ ಮಗನನ್ನು, ಒಬ್ಬ ಮಗಳನ್ನು ಪಡೆದಳು. ಅವರೆಲ್ಲರೂ ಸುಖ ಸಂತೋಷದಿಂದಿದ್ದರು.

# ಕುಟಿಲಾತ್ಮಕ ಕಲಿಪುರುಷ

ರಾಜೇಂದ್ರ ಧರ್ಮನೃಪಾಲನೇ ಕೇಳು. ವಿದರ್ಭ ನಗರಕ್ಕೆ ದಮಯಂತಿಯ ಸ್ವಯಂವರಕ್ಕಾಗಿ ಬಂದಿದ್ದ ಎಲ್ಲ ಜನ ತಮ್ಮ ತಮ್ಮ ರಾಜರೊಂದಿಗೆ ತಮ್ಮ ತಮ್ಮ ಪಟ್ಟಣಗಳನ್ನು ಸೇರಿದರು. ಆಗ ವಿದರ್ಭವನ್ನು ಬಿಟ್ಟು ದೇವೇಂದ್ರನು ದಿಕ್ಪಾಲಕರೊಂದಿಗೆ ಅಮರಾವತಿಗೆ ಬರುವಾಗ – ದಮಯಂತಿಯನ್ನು ಸಂತೋಷದಿಂದ ಕೊಂಡಾಡುತ್ತಿದ್ದನು. ಅವರು ಮಾರ್ಗಮಧ್ಯದಲ್ಲಿ ಕಪಟಿಯೂ ಹೃದಯಹೀನನೂ ಆದ ಕಲಿಪುರುಷನನ್ನು ಕಂಡರು. ಅವನ ತಲೆ ಗುಂಗುರು ಕೂದಲಿಂದ ಕೂಡಿದ್ದು ಕತ್ತು ಬಾಗಿತ್ತು. ಕೆಂಗಣ್ಣಿನಿಂದ ಕೂಡಿದ ಮುಖದಲ್ಲಿ ಹರಕುಗಡ್ಡವಿದ್ದು ಮೀಸೆ ಕೆಂಚಾಗಿತ್ತು. ಅವನು ಮಲಿನ ವಸ್ತ್ರಧಾರಿಯಾಗಿದ್ದು ಎತ್ತರವಾದ ಉಕ್ಕಿನ ರಥದಲ್ಲಿ ಬರುತ್ತಿದ್ದನು. ಅವನು ಅಮರೇಶ್ವರನನ್ನು ಎದುರುಗೊಂಡು ಮಂದ ನಗೆ ಬೀರುತ್ತ,

'ಯಾರು ನೀನು? ಜಂಭನನ್ನು ಕೊಂದ ದೇವೇಂದ್ರನೇ? ಯಾರಿವರು? ಯಮ ವರುಣರಾದ ದಿಕ್ಪಾಲಕರೇ? ಎಲ್ಲಿಗೆ ನಿಮ್ಮ ಪಯಣ?' ಎಂದು ಪ್ರಶ್ನಿಸಿದನು.

ಇಂದ್ರನು ಸಾಹಸ ಭಾವದಲ್ಲಿ ನಸುನಗೆಯೊಡನೆ 'ನಾವು ವಧು ದಮಯಂತಿಯನ್ನು ನಳನಿಗೆ ಧಾರೆಯೆರೆದು ಮದುವೆ ಮಾಡಿಸಿ ಬಂದೆವು' ಎಂದು ಹೇಳುವುದೇ ತಡ, ಕಲಿಪುರುಷ ಕೋಪಗೊಂಡು ಕಿಡಿಕಾರುತ್ತ ಹೇಳಿದ :

'ದೇವತೆಗಳಾದ ನೀವು ಮನುಷ್ಯರಿಗಿಂತ ಬಲಾಢ್ಯರು. ಆ ಹೆಣ್ಣನ್ನು ನೀವು ಪಡೆಯ ಲಾರದೆ ನಳರಾಜನಿಗೆ ಕೊಟ್ಟು ಬಂದಿರುವಿರಲ್ಲ! ಹರಹರ ಮಹಾದೇವ! ನನಗೆ ಅಪ್ಪಣೆ ಮಾಡಿ ಕಳುಹಿಸಿ, ನಿಮ್ಮ ಮನದ ಬಯಕೆಯನ್ನು ನೆರವೇರಿಸುತ್ತೇನೆ.'

'ಕಲಿಪುರುಷ ಒಳ್ಳೆಯ ಮಾತಾಡಿದೆ. ನಿನಗೆ ಇಷ್ಟೊಂದು ಪೌರುಷವಿದೆಯೆ? ಆದರೆ ಈಗ ನಮಗೆ ಆ ದಮಯಂತಿಯಲ್ಲಿ ಮನಸ್ಸಿಲ್ಲ. ಎಲ್ಲ ರಾಜರುಗಳಲ್ಲಿ ನಳ ಮಹಾರಾಜನು ಅಲಂಕಾರಪ್ರಾಯ, ಮಹಾಶೂರ, ಅವನನ್ನು ಸೋಲಿಸಲು ಬ್ರಹ್ಮನಿಗೇ ಸಾಧ್ಯವಿಲ್ಲ. ನಿನ್ನಿಂದ ಏನು ಆದೀತು?'

ಇಂದ್ರನ ಆ ನುಡಿ ಕೇಳಿ ಕಲಿಪುರುಷನು ಅತಿ ಕೋಪಗೊಂಡು ಬುಸುಗುಡುತ್ತ ಹೇಳಿದ :

'ಇಂದ್ರನೇ, ನೀನು ನನ್ನನ್ನು ಸರಿಯಾಗಿ ತಿಳಿದುಕೊಂಡಿಲ್ಲ. ಸೂರ್ಯನ ಎದುರಿನಲ್ಲಿ ಕತ್ತಲಿನ ಆಟವೇ? ನನಗೆ ಸಮನಾದವರು ಯಾರಿದ್ದಾರೆ? ಮೋಸದಿಂದ ಆ ಹೆಣ್ಣನ್ನು ತರುತ್ತೇನೆ. ನಳ ರಾಜನನ್ನು ಹಾಳುಗೆಡವಿ ಕಾಡಿಗೆ ಕಳುಹಿಸುತ್ತೇನೆ. ನೋಡುತ್ತಿರು' ಎಂದು ಹೇಳುತ್ತ ತನ್ನ ಪರಾಕ್ರಮದ ನುಡಿ ಮುಂದುವರೆಸಿದ,

'ಹರಿಹರ ಬ್ರಹ್ಮಾದಿಗಳ, ಮನುಷ್ಯ ನಾಗರ ದೇವತೆಗಳ, ಯಕ್ಷ ಕಿನ್ನರ ಗಂಧರ್ವ ಗರುಡರ ಶಕ್ತಿಯನ್ನು ಅಡಗಿಸುವೆ! ಹಾಗಿರುವಾಗ ಈ ನಳಭೂವರನನ್ನು ಕೆಡಿಸುವುದು ಯಾವ ದೊಡ್ಡ ಕೆಲಸ! ಈ ಲೋಕದಲ್ಲಿ ನನಗೆ ಎದುರಾದವರೇ ಇಲ್ಲ! ಇದು ನಿಮಗೆ ತಿಳಿಯದೇ?'

ಆ ಕುಟಿಲಾತ್ಮಕನ ಮಾತಿಗೆ ಇಂದ್ರನು ಮೌನವಾಗಿ ದಿಕ್ಪಾಲಕರನ್ನು ನೋಡುತ್ತಿರಲು, ಇನ್ನೂ ಸ್ಫೂರ್ತಿಗೊಂಡಂತೆ ಅವನು ಮಾತು ಮುಂದುವರೆಸಿ,

'ಇಂದ್ರನೇ ನಿಮಗೆ ಪೌರುಷವಿಲ್ಲವಾಗಿ ನಳನು ಹೆಣ್ಣನ್ನು ಪಡೆದುಕೊಂಡನು. ನೀವು ಪುರುಷಾಧಮರು. ಈ ವಟುವೇಷ ನಿಮಗೇಕೆ? ಅದನ್ನು ನನಗೆ ಕೊಡಿ. ನಿಮಗೆ ಆ ದಮಯಂತಿಯನ್ನು ಪಟ್ಟದ ರಾಣಿಯನ್ನಾಗಿ ಮಾಡುವೆ' ಎಂದು ಭ್ರಮಾಧೀನನಾಗಿ ಬಡಬಡಿಸಿದನು.

ಅದನ್ನು ಕೇಳಿ ಅವರು 'ಹರಹರ!' ಎಂದು ಕಿವಿ ಮುಚ್ಚಿಕೊಂಡರು. ಆ ದುಷ್ಟನ ಮಾತಿಗೆ ಇಂದ್ರನು ಕನಲಿ ಕೆಂಡದಂತಾಗಿ 'ವ್ಯರ್ಥ ಮಾತುಗಳೇಕೆ? ನಿನಗಿದು ಉಚಿತವಲ್ಲ. ವಿಷ್ಣುವಿಗೆ ಸಮನೆನಿಸುವ ಆ ನಳಮಹಾರಾಜನಿಗೆ ಕೇಡು ಬಗೆಯುವುದು ಸರಿಯಲ್ಲ. ಅವನು ಚಂದ್ರವಂಶಜ. ಸಜ್ಜನರಿಗೆ ಆಶ್ರಯದಾತ, ರಾಜರಲ್ಲಿ ಖ್ಯಾತಿವೆತ್ತವನು, ಧಾರಾಳ ಬುದ್ಧಿಯ ನಿರ್ಮಲಮನದವನು. ಅಂತಹವನಿಗೆ ನಾವು ವರವನ್ನು ಕೊಟ್ಟಿದ್ದೇವೆ. ಸದಾ ಅವನನ್ನು ಸ್ಮರಿಸಿದವರ ಪಾಪ ನಾಶವಾಗುವುದು. ಆ ಭುವನಪತಿಗೆ ಸಮನಾದವರು ಲೋಕದಲ್ಲಿ ಯಾರಿದ್ದಾರೆ?'

ಇಂದ್ರನ ಮಾತು ಕೇಳಿ ಕಲಿಯ ಸಿಟ್ಟು ಕೆರಳಿತು. ಅವನು 'ನಾನು ಛಲವನ್ನು ಹಿಡಿಯುವುದಿಲ್ಲ. ಹಿಡಿದ ಬಳಿಕ ಅದನ್ನು ಬಿಡದೆ ಸಾಧಿಸುವೆ. ನಿಷಧ ರಾಜನನ್ನು ಅರಣ್ಯಕ್ಕೆ ಓಡಿಸದೆ ಬಿಡುವುದಿಲ್ಲ. ನೀವು ಮಾತಾಡಬೇಡಿ. ಸುಮ್ಮನಿರಿ' ಎಂದು ಹೇಳಿದ.

ಅದನ್ನು ಕೇಳಿದ ದಿಕ್ಪಾಲಕರು ನಡುಗಿ ಹೋದರು. ಸುರಪತಿ ಇಂದ್ರನು 'ಇವನು ಕಡುಪಾಪಿ. ಹಿಡಿದ ಹಠ ಸಾಧಿಸುತ್ತಾನೆ' ಎಂದು ಮನನೊಂದು ನುಡಿಯುತ್ತ ಅಲ್ಲಿ ನಿಲ್ಲಲಾರದೆ ಅಮರಾವತಿಗೆ ನಡೆದನು.

## ಖಳಕುಳ ತಿಲಕ ಹೊಕ್ಕನು ನಿಷಧ ಪಟ್ಟಣವ

ಅತಿ ದುಷ್ಟನಾದ ಕಲಿಪುರುಷನು ಭೂಲೋಕಕ್ಕೆ ಇಳಿದನು. ತನ್ನ ಸೈನಿಕರನ್ನುದ್ದೇಶಿಸಿ, 'ನಳನೃಪನನ್ನು ನಮ್ಮ ಅಧೀನಕ್ಕೆ ಒಳಪಡಿಸಿಕೊಳ್ಳುವುದು ಅಸಾಧ್ಯ. ಆತನಿಗೆ ಜಯಲಕ್ಷ್ಮಿ ಒಲಿದಿದ್ದಾಳೆ. ಆತನಲ್ಲಿ ಸಚ್ಚಾರಿತ್ರ್ಯ ಮನೆ ಮಾಡಿದೆ. ಆತನತ್ತ ದುರ್ಗುಣ, ದುರ್ನಡತೆಗಳು ಹೊರಳಿ ನೋಡವು' ಎಂದು ಹೇಳುತ್ತ ನಿಷಧ ಪಟ್ಟಣವನ್ನು ಹೊಕ್ಕನು.

ಆ ನಗರವು ಮಲ್ಲಿಗೆ ಸಂಪಿಗೆ ವನಗಳಿಂದ, ಕೇದಗೆ ಮೆಳೆಗಳಿಂದ ಕಂಪುಗೊಂಡಿತ್ತು. ರುದ್ರಾಕ್ಷಿ, ಬಿಲ್ವಪತ್ರೆಯ ಮರಗಳು ಆರಾಧನೆಗಾಗಿ ಹಸಿರಾಗಿದ್ದವು. ಕೊಳಗಳು ಕಮಲ ಪುಷ್ಪಗಳಿಂದ ಕಂಗೊಳಿಸುತ್ತಿದ್ದವು. ಕಬ್ಬು, ದ್ರಾಕ್ಷಿ, ಖರ್ಜೂರ ತೋಟಗಳು ರಸದ ನೆಲೆಯಾಗಿದ್ದವು. ಅವನ ರಾಜ್ಯದಲ್ಲಿ ನಿರುಪಯುಕ್ತವಾದ ಭೂಮಿಯೇ ಇರಲಿಲ್ಲ.

ನಳಮಹಾರಾಜನ ರಾಜ್ಯದಲ್ಲಿಯ ಪ್ರಜೆಗಳು ಬೇಡಿದವರಿಗೆ ಇಲ್ಲವೆನ್ನದೆ ನೀಡುವ, ತಮ್ಮ ರೀತಿ ರಿವಾಜು ಬಿಡದ, ಸತ್ಯವನ್ನಾಡುವ ನಿರ್ಮಲರು. ಅವರು ಪಂಥವನ್ನು ಕಟ್ಟದ, ಎಲ್ಲರ ಹಿತೈಷಿಗಳಾಗಿರುವ, ಕ್ರೋಧವಿಲ್ಲದ ಸದ್ಧರ್ಮಜೀವಿಗಳು. ಆಚಾರ ಮತ್ತು ವರ್ಣಾಶ್ರಮ ಧರ್ಮ ಪಾಲಕರು. ಹರಿಭಕ್ತಿಭಾವ, ವ್ರತ ನಿಯಮ ನಿಷ್ಠೆಯಲ್ಲಿ ಒಮ್ಮತದಿಂದಿರುವವರು. ಅವನ ರಾಜ್ಯದಲ್ಲಿ ಪತ್ನಿಯರು ಸತಿಗೆ ವಂಚಿಸುವುದಿಲ್ಲ. ಮಕ್ಕಳು ತಂದೆಯ ಮಾತನ್ನು ಮೀರುವುದಿಲ್ಲ.

ಆ ನಗರದಲ್ಲಿ ಕಲಿಪುರುಷನು ಮಾಯಾ ರೂಪಿನಿಂದ ಪಿಶಾಚಿಯ ರೀತಿ ಬೀದಿ ಬೀದಿಗಳಲ್ಲಿ ಅಲೆದಾಡಿದನು. ವಿಷ್ಣು ಭಕ್ತರು ಕಂಡುಬಂದರೆ ನಯವಿನಯದಿಂದ ವರ್ತಿಸುತ್ತ, ಕುಜನರನ್ನು ಕಾಡುತ್ತ ಅರಮನೆಗೆ ಬಂದನು. ಅವನು ನಳನ ದೋಷವನ್ನು ಕಾಣಲು ಆ ನಗರದ ಉದ್ಯಾನವೀದಿಯ ತೆಂಗಿನ ಮರಗಳ ಹಾಗು ವಿವಿಧ ಬೃಹತ್ ವೃಕ್ಷಗಳ ತುದಿಯಲ್ಲಿ ಅಡಗಿ ಕುಳಿತನು. ಅನಂತರ ವಿಸ್ತಾರವಾಗಿ ಹರಡಿಕೊಂಡಿದ್ದ ಎಕ್ಕೆಗಿಡದ ತುದಿಗಳಲ್ಲಿ ಅವಿತು ಬಹುದಿನ ದುಷ್ಟ ಯೋಚನೆಯಲ್ಲಿ ಕಾಲ ಕಳೆದನು.

## ಪೂರ್ವ ಜನ್ಮಾಂತರದ ಫಲವದನರಿಯೆ ಬಂದುದು ಕಾಲಗತಿ ನೃಪಗೆ

ರಾಜನು ಅರಮನೆಯಲ್ಲಿ ಪ್ರತಿ ದಿನವು ಮುನಿಶ್ರೇಷ್ಠರನ್ನು, ಬ್ರಾಹ್ಮಣರನ್ನು ಸತ್ಕರಿಸುತ್ತಿದ್ದನು. ಜಪತಪ ಹೋಮ ಯಜ್ಞಾದಿಗಳನ್ನು ಮಾಡುತ್ತ ದೇವತೆಗಳ ಸಂತರ್ಪಣೆಯಲ್ಲಿರುತ್ತಿದ್ದನು. ಹೀಗಿದ್ದರೂ ಅವನ ಪೂರ್ವಜನ್ಮದ ಕರ್ಮಫಲವಾಗಿ ಕೆಟ್ಟಕಾಲ ಬಂದಿತು.

ನಳನು ಒಂದು ದಿವಸ ಆಚಮನ ಕಾಲ (ಆತ್ಮ ಶುದ್ಧಿಗೋಸ್ಕರ ಅಂಗೈ ಗುಳಿಯಲ್ಲಿ ಶುದ್ಧೋದಕವನ್ನು ಮಂತ್ರಪೂರ್ವಕವಾಗಿ ಕುಡಿಯುವುದು)ದಲ್ಲಿ ಶುದ್ಧಾಚಮನವನ್ನು ಮಾಡದೆ, ಅಲ್ಪಾಚಮನವನ್ನು ಮಾಡಿದನು. ನಿಂತು ನೀರು ಕುಡಿದನು. ಅದನ್ನು ಕಲಿಪುರುಷನು ನೋಡಿದನು. ನಳನನ್ನು ಕಾಡಿಸಲು ಅದೇ ಒಳ್ಳೆಯ ಸಮಯವೆಂದು ಬಗೆದನು.

ಧರ್ಮರಾಜನೇ ಕೇಳು. ವಿಧಿನಿಯಮವನ್ನು ತಪ್ಪಿಸಲು ಯಾರಿಗೆ ಸಾಧ್ಯ ಎಂದು ರೋಮಶ ಮುನಿಗಳು ಕಥೆ ಹೇಳಿದರು.

ನಿಷ್ಕಪಟ ನಳನೃಪನನ್ನು ಹಾಳು ಮಾಡಲು ಕಲಿಯು ಕಪಟ ಬ್ರಾಹ್ಮಣ ವೇಷಧರಿಸಿ, ಒಂದು ಉಪಾಯವನ್ನು ಆಲೋಚಿಸಿದನು. ಅದನ್ನು ಕಾರ್ಯಗತಗೊಳಿಸಲು ಪುಷ್ಕರನ ಬಳಿಗೆ ಹೋದನು. ಮೋಸ ಕಾರ್ಯ ನಿಪುಣನಾದ ಕಲಿಯು ಅವನನ್ನು ಮರುಳು ಮಾಡುತ್ತ ಹೀಗೆ ಹೇಳಿದನು :

'ನೀನು ನಳಮಹಾರಾಜನ ಮಿತ್ರನೆಂಬುದನ್ನು ಕೇಳಿ ಬಂದಿದ್ದೇನೆ. ನೀನು ಅಪಕೀರ್ತಿಗೆ ಹೆದರಬೇಡ. ನನ್ನ ಮಾತು ಕೇಳಿದರೆ ಅಖಿಲ ಸಾಮ್ರಾಜ್ಯ ನಿನ್ನದಾಗುತ್ತದೆ.'

'ಓಹ್ ಕೃಪಾಳುವೇ, ನೀನು ಯಾರು?'

'ನಾನು ಕಲಿಪುರುಷ. ನಾನು ಇಡೀ ಲೋಕದಲ್ಲಿ ಬಲಶಾಲಿ. ನಳನೊಡನೆ ದ್ಯೂತವನ್ನಾಡಿ ನಿನ್ನನ್ನು ಲೆತ್ತದಲ್ಲಿ ಗೆಲಿಸುತ್ತೇನೆ. ಆಗದು ಎಂದು ಹೇಳಬೇಡ. ನಿನ್ನನ್ನು ಈ ರಾಜ್ಯದ ರಾಜನನ್ನಾಗಿ ಮಾಡುತ್ತೇನೆ.'

'ಇದು ಸಾಧ್ಯವೇ?'

'ನಾನು ಸುಳ್ಳು ಆಡುವವನಲ್ಲ. ನಳನನ್ನು ಕಿತ್ತು ಬಿಸಾಡುವೆ. ನೀನು ನನ್ನನ್ನು ನಂಬು.'

ನೀಚ ಪುಷ್ಕರನು ಕಲಿಯ ಮಾತನ್ನು ನಂಬಿದನು. ತನ್ನ ಹೃದಯದಲ್ಲಿ ಅದಕ್ಕೆ ಎಡೆಗೊಟ್ಟನು. ಸಂತೋಷದಿಂದ ಕಲಿಯೊಡನೆ ಹೊರಟನು.

ಶ್ರೀವಿಷ್ಣುವಿನ ಪ್ರತಿಬಿಂಬದಂತಿರುವ ನಳನ ಓಲಗಕ್ಕೆ ಅವರಿಬ್ಬರೂ ಸಂಭ್ರಮದಿಂದ ಬಂದರು. ಆಗ ನಳಮಹಾರಾಜನು ಚಿನ್ನ ಹಾಗೂ ರತ್ನಗಳಿಂದ ಹೊಳೆಯುವ ಮಂಟಪದಲ್ಲಿ ಇತರ ರಾಜರೊಂದಿಗೆ ಸಿಂಹಾಸನದಲ್ಲಿ ಕುಳಿತಿದ್ದನು. ಅವನ ಎಡಬಲದಲ್ಲಿ ಸುಂದರ ತರುಣಿಯರು ರಾಜನನ್ನು ಹೊಗಳುತ್ತ ಚಾಮರ ಬೀಸುತ್ತಿದ್ದರು. ಆಗ ಪುಷ್ಕರನು ನಳಮಹಾರಾಜನಿಗೆ ನಸುನಗುತ್ತ ಕೈ ಮುಗಿದು ಹೀಗೆ ಹೇಳಿದನು :

'ಅರಸನೇ ಕೇಳು. ಈ ಬ್ರಾಹ್ಮಣನು – ಸೂರ್ಯನಂತೆ ಕಾಂತಿಯಿಂದ ಹೊಳೆಯುವ ಎರಡು ಪಗಡೆಗಳನ್ನು – ನನಗೆ ಕಾಣಿಕೆಯಾಗಿ ಕೊಟ್ಟಿದ್ದಾನೆ. ನನಗೆ ಪಗಡೆಯಾಡಲು ಮನಸ್ಸಾಗಿದೆ. ಪಗಡೆ ಮಣೆಯನ್ನು ತರಿಸು, ಆಡೋಣ. ಇದರಲ್ಲಿ ಯಾರೇ ಸೋಲಲಿ ಅವರು ರಾಜ್ಯವನ್ನು ಬಿಟ್ಟು ಹೆಂಡತಿಯೊಂದಿಗೆ ಕಾಡಿಗೆ ಹೋಗಬೇಕು.'

ಆ ನುಡಿ ಕೇಳಿ ನಳನೃಪನು ಮೌನದಿಂದಿರುವಾಗ ಪುಷ್ಕರನು ಆತನನ್ನು ಪಗಡೆಯಾಟಕ್ಕೆ ಸೆಳೆಯಲೇಬೇಕೆಂದು ತನ್ನ ಮಾತು ಮುಂದುವರಿಸಿ 'ಧರಣಿ ಪತಿಯೇ, ನೀನು ಇಷ್ಟು ಹರ್ಷದಿಂದಿರುವಾಗ, ಮನದಲ್ಲಿ ಉಂಟಾಗುವ ಕೊರತೆಯನ್ನು ಬಿಡು. ಇದು ರಾಜರ ಪಂಥ. ಯುದ್ಧಕ್ಕೆ, ಬೇಟೆಗೆ, ಜೂಜಿಗೆ ಕರೆದಾಗ ಹಿಂದೆಗೆಯುವುದು ರಾಜನೀತಿಯಲ್ಲ. ಮನಸ್ಸು ಮಾಡು' ಎಂದು ಹೇಳಿ ಮತ್ತೆ ಕೈಮುಗಿದನು.

ಮೇದಿನೀಪತಿ ಧರ್ಮರಾಜನೇ ಕೇಳು. ಸಜ್ಜನನು ಸಾಧುವು ಆದ ನಳನು ಆ ದುರಾತ್ಮನ ಹೃದಯದ ನೀಚತನವನ್ನು ಹೇಗೆ ತಿಳಿದಾನು? ಅವನು ಪುಷ್ಕರನನ್ನು ಹೊಗಳಿ ಪಗಡೆಯಾಡಲು ಕುಳಿತನು. ಕಲಿಪುರುಷನು ಭೇದೋಪಾಯದಿಂದ, ಮಾಯೋಪಾಯದಿಂದ ಅರೆಗಳಿಗೆಯಲ್ಲಿ ಪುಷ್ಕರನಿಗೆ ಅನೇಕ ವಸ್ತುಗಳನ್ನು ಗೆಲಿಸಿಕೊಟ್ಟನು.

ಆ ಲೆತ್ತದ ಆಟದಲ್ಲಿ ನಳನಿಗೆ ಎರಡು ಐದು ಸಂಖ್ಯೆಗಳು ಬೀಳದೆ ಹೋದವು. ಎರಡು, ಮೂರು ಸಂಖ್ಯೆಗಳು ಬೀಳುತ್ತಿದ್ದವು. ಹಾಗಾಗಿ ಉದ್ಧಟ ಪುಷ್ಕರನು ಮೊದಲನೆಯ ಆಟದಲ್ಲಿ ಗೆದ್ದನು. ಅದರಲ್ಲಿ ನಳನು ಬಗೆ ಬಗೆಯ ರತ್ನಗಳು, ಧನಧಾನ್ಯಗಳು, ಆನೆ ಕುದುರೆ ರಥ ಮುಂತಾದ ಅಗಣಿತ ಅಮೂಲ್ಯ ವಸ್ತುಗಳನ್ನು ಸೋತನು.

ನಳನೃಪನು ಜೂಜಿನಲ್ಲಿ ರಾಜ್ಯವನ್ನು, ಭಂಡಾರವನ್ನು ಕಳೆದುಕೊಂಡನು. ದುರದೃಷ್ಟ ದಿಂದ ಕೇಡುಗರ ಕೈ ಮೇಲಾಯಿತು. ಅರಸನ ಮುಖ ಬಾಡಿತು. ಅದನ್ನು ನೋಡಿ ಸಜ್ಜನರು 'ರಾಜ ಜೂಜಾಡಲು ಏಕೆ ಹೋದ? ವಿಧಿಯ ಕೈವಾಡದಲ್ಲಿ ಸೋತು ಹೋದನಲ್ಲ' ಎಂದು ವ್ಯಥೆ ಪಟ್ಟರು.

ದುಷ್ಟ ಪುಷ್ಕರನು ನಳನನ್ನು ನೋಡಿ ಕುಹಕ ನಗು ನಗುತ್ತ 'ರಾಜನೇ ಭಂಡಾರ, ಸುವಸ್ತುಗಳೆಲ್ಲವೂ ನನ್ನದಾದವು. ಇನ್ನು ಯಾವುದನ್ನು ಪಣವಾಗಿಡುವೆ ಹೇಳು' ಎಂದು

ಕೇಳಲು ನಳನು ಆಲೋಚನೆಗೆ ಒಳಗಾದನು. ಮನಸ್ಸಿನಲ್ಲಿ – ನನ್ನ ಪತ್ನಿಯನ್ನೇ ಪಣವಾಗಿಡುವೆ, ಸೋತ ರಾಜ್ಯವನ್ನು ಗೆಲುವೆ – ಎಂದು ನಿಶ್ಚಯಿಸಿದನು.

ಅದನ್ನೆಲ್ಲ ನೋಡುತ್ತಿದ್ದ ಅರಸನ ಆಪ್ತ ಪುರೋಹಿತ ಅತಿ ದುಃಖಿತನಾಗಿ ಮನಕರಗಿ ರಾಣೀವಾಸಕ್ಕೆ ಬಂದನು. ತರುಣಿಯರ ಮೇಳದಲ್ಲಿ ಶ್ರೇಷ್ಠ ರತ್ನಪೀಠದಲ್ಲಿ ಹರುಷದಿಂದ ರಂಜಿಸುತ್ತಿರುವ ದಮಯಂತಿಯನ್ನು ಕಂಡು ಕೈಮುಗಿದು ಹೇಳಿದನು :

'ತಾಯಿ, ಮನಸ್ಸಿನಲ್ಲಿ ನೋಯಬೇಡಿರಿ. ನಮ್ಮ ಸರ್ವಸಂಪತ್ತು ನಷ್ಟವಾಯಿತು. ಇನ್ನು ಮುಂದಿನ ಸ್ಥಿತಿಯನ್ನು ನೀವೆ ಬಲ್ಲಿರಿ.'

ಕಮಲ ವನದಲ್ಲಿ ಮಂಜು ಸುರಿದಾಗ ಆಗುವಂತೆ ಸತಿ ದಮಯಂತಿಯ ಮುಖ ಚಿಂತೆಯಿಂದ ಬಾಡಿತು. ಅವಳು 'ಶ್ರೀಹರಿಯ ಕರುಣ ಕವಚವು ಸವೆದು ಹೋದಮೇಲೆ ಯಾರು ಏನು ತಾನೆ ಮಾಡಲು ಸಾಧ್ಯ? ಹರಹರ ದುಷ್ಟಬುದ್ಧಿಯ ಪುಷ್ಕರನು ಈ ರೀತಿ ಕೋಪಿಸಿಕೊಂಡನೇ?' ಎಂದು ತಳಮಗೊಂಡು ದುಃಖಿಸಿದಳು.

'ನಳನೃಪನು ರಾಜ್ಯಭ್ರಷ್ಟನಾಗಿ ಅಲೆಯುವಂತಾಯಿತೇ?' ಎಂದು ಹೇಳಿ ಸಂಕಟಪಡುತ್ತ ನಳನಿರುವೆಡೆಗೆ ಬಂದಳು. ಅವನ ಮನದ ಉಮ್ಮಳವನ್ನು ಅರಿತುಕೊಂಡಳು. ಕತ್ತಲ ರಾಹು ಗ್ರಹವು ಹಿಡಿದ ಸೂರ್ಯನಂತೆ ತೇಜೋಹೀನನಾದ ತನ್ನ ಪತಿಯನ್ನು ಕಂಡಳು. ಮನಸ್ಸಿಗೆ ಧೈರ್ಯ ತಂದುಕೊಂಡಳು. ಕೈಮುಗಿದು ಹೇಳಿದಳು :

'ಚಂದ್ರವಂಶ ಸಮುದ್ರದ ಚಂದ್ರ, ಶತ್ರುರಾಜ ಭಯಂಕರ, ಭಾಸ್ಕರ ತೇಜರಾದ ನಿಮಗೆ ಈ ಜೂಜಿನ ವ್ಯಸನ ಉಂಟಾಯಿತೇ? ಶಿವ ಶಿವ ಮಹಾದೇವ! ಇದು ಶ್ರೀಹರಿಯ ಕರುಣೆ. ಪುಷ್ಕರನು ನಿಮ್ಮನ್ನು ಸೋಲಿಸಿ ಬಿಟ್ಟನೇ? ಇದಕ್ಕೆಲ್ಲಕ್ಕೂ ವಿಧಿ ಕಾರಣ. ಇನ್ನು ಸಾಕು ಮಾಡಿ.'

ದಮಯಂತಿಯ ಮಾತಿಗೆ ಸಭೆಯಲ್ಲಿದ್ದವರು 'ಎಲವೋ ಕ್ಷುದ್ರನೇ, ನಿನ್ನ ಪಗಡೆಯಾಟ ನಿಲ್ಲಿಸು' ಎಂದು ಪುಷ್ಕರನಿಗೆ ಬೈದು ಹೇಳಿದರು.

ಆಗ ಹಾದಿ ತಪ್ಪಿದ ಜಿಂಕೆ ಬೇಡನ ಬಲೆಗೆ ಬಿದ್ದ ಹಾಗೆ ನಳನ ಸ್ಥಿತಿಯಾಗಿತ್ತು. ದುಃಖಭರದಲ್ಲಿ ಪತ್ನಿಗೆ,

'ದಮಯಂತಿಯೇ ಕೇಳು. ಅಪಜಯದ ನಾರಿಯ ಸೆರಗನ್ನು ಹಿಡಿದೆನು. ರಾಜ್ಯಲಕ್ಷ್ಮಿಯನ್ನು ಪರರಿಗೆ ಕೊಟ್ಟೆನು. ಉಳಿದಿರುವುದು ಈ ಶರೀರ ಮಾತ್ರ, ಹೀಗಾದುದಕ್ಕೆ ಹೆದರಬೇಡ. ತರುಣಿಯಾದ ನೀನು ಕಾಡು, ಗಿರಿಗಹ್ವರಗಳಲ್ಲಿ ಹೇಗೆ ಕಷ್ಟಪಡುವೆ? ಹರ ಹರಾ!' ಎಂದು ಹೇಳಿ ನಿಟ್ಟುಸಿರು ಬಿಟ್ಟನು.

## ಸತ್ಯವನು ಕೈಹಿಡಿದು ಸಲಹೆಂದಳು ಸರೋಜಮುಖಿ

ಆಗ ದಮಯಂತಿಯು ನಳನನ್ನು ಸಂತೈಸುತ್ತ ಹೇಳಿದಳು :

'ಶಶಿಕುಲ ಶಿರೋಮಣಿಯೇ ಕೇಳು. ಹೆತ್ತವರು, ಸತಿಸುತರು, ಮನೆ ಗೃಹಕೃತ್ಯಗಳು, ಬಂಧು ಬಾಂಧವರು, ರಾಜರು, ಭೋಗಸಂಪತ್ತು ಶಾಶ್ವತವಾದುದಲ್ಲ. ಶರೀರ ಸುಖ ಅಶಾಶ್ವತ, ಎಂಬುದನ್ನು ತಿಳಿ. ಸತ್ಯ ಮಾತ್ರ ಶಾಶ್ವತವಾದುದು. ಅದರ ಕೈಹಿಡಿದು ನನ್ನನ್ನು ಕಾಪಾಡು.'

ನಳನನ್ನು ಸಮಾಧಾನಪಡಿಸಿ, ದುಃಖಿಸುವುದು ಬೇಡ ಎಂದು ಹೇಳಿ ತನ್ನ ಅಂತಃಪುರಕ್ಕೆ ಹೊರಡಲು ಅನುವಾದಳು. ಅದನ್ನು ಕಂಡ ದುಷ್ಟ ಪುಷ್ಕರನು 'ಜೂಜಿನಲ್ಲಿ ಸೋತನಂತರ, ನೀವು ಹೇಗೆ ರಾಜದಲ್ಲಿರುವಿರಿ?' ಎಂದು ಪ್ರಶ್ನೆ ಮಾಡಿದನು.

ಆಗ ನಳ ತನ್ನ ಪತ್ನಿಯೊಂದಿಗೆ ವನವಾಸಕ್ಕೆ ತೆರಳಲು ಸಿದ್ಧನಾದನು. ತಾನು ತೊಟ್ಟಿದ್ದ ರತ್ನಾಭರಣಗಳನ್ನು ತೆಗೆದೊಗೆದನು. ದಮಯಂತಿಯೊಂದಿಗೆ ಕುಲಗುರುಗಳ ಪಾದಕ್ಕೆ ನಮಸ್ಕರಿಸಿ, ಅರಮನೆಯನ್ನು ಬಿಟ್ಟು ಹೊರಟನು. ಅದನ್ನು ನೋಡಿ ನಗರದ ಜನರೆಲ್ಲ ನೊಂದು ದುಃಖಿಸಿ ಕಣ್ಣೀರುಗರೆದರು. ಗೋಳಿಟ್ಟು ಕೂಗಾಡಿದರು. ಇಡೀ ನಗರವು ಶೋಕರವದಲ್ಲಿ ತುಂಬಿಹೋಯಿತು.

ನಳನೃಪನ ಪರಿಚಾರಕರು, ಪರಿವಾರದವರು, ಮಂತ್ರಿಗಳು, ಓಲಗದ ಸಾಮಂತರಾಜರು, ಜಟ್ಟಿಗಳು, ಗಾಯಕರು ಸಾಲು ಸಾಲಾಗಿ ನಿಂತು ಕಂಬನಿ ಮಿಡಿದರು. ನಗರದ ಬಾಲೆಯರು ಬಾಲಕರು ಪುರಜನರೆಲ್ಲ ರಾಜನ ಅರಸಿ ದಮಯಂತಿಯನ್ನು ಕಂಡು ಗೋಳಿಡುತ್ತ ದುಃಖಿಸಿದರು.

ರಾಣಿ ದಮಯಂತಿಯು ಮುಂದಿನದನ್ನು ಆಲೋಚಿಸಿ, ತನ್ನ ಮಕ್ಕಳನ್ನು ರಥದಲ್ಲಿ ಕುಳ್ಳಿರಿಸಿದಳು. ಅವರನ್ನು ಆಪ್ತರೊಡನೆ ತನ್ನ ತವರು ಮನೆ ವಿದರ್ಭಕ್ಕೆ ಕಳುಹಿಸಿದಳು.

## ದಮಯಂತಿ ಸತ್ಯಜ್ಞಾನಿ ಯಲ್ಲಾಸತಿಯರಿಗೆ ಗುರು

ಧರ್ಮರಾಜನೇ ಕೇಳು. ಇಡೀ ನಗರದ ಜನರೆಲ್ಲ ಗೋಳಿಟ್ಟು ರೋಧಿಸುತ್ತಿರಲು ಸತಿ ದಮಯಂತಿಯು ಇನ್ನೊಂದು ಯೋಚಿಸದೆ – ಸತ್ಯ ಹಾಗು ಶುದ್ಧಭಾವದಲ್ಲಿ ಪತಿಯನ್ನು ಹಿಂಬಾಲಿಸಿದಳು. ದಮಯಂತಿಯು ಸತ್ಯವನ್ನು ತಿಳಿದವಳು ಮತ್ತು ಪತಿವ್ರತಾಗುಣದಲ್ಲಿ ಈ ಲೋಕದ ಸ್ತ್ರೀಯರಿಗೆಲ್ಲಾ ಗುರುವಾದವಳು. ಆ ಘನ ಸತಿಯು ಮೌನವಾಗಿ ಪತಿಯ ಚರಣ ಕಮಲಗಳನ್ನೆ ಮನದಲ್ಲಿ ಧ್ಯಾನಿಸಿದಳು. ಇದು ಭಗವಂತನ ಆಜ್ಞೆ ಎಂದುಕೊಂಡು ಅರಣ್ಯಕ್ಕೆ ನಡೆದಳು.

# ನಳ ದಮಯಂತಿಯರ ವಿಧಿ

**ಕು**ಂತೀ ತನಯನೇ ಕೇಳು. ನಗರವನ್ನು ಬಿಟ್ಟ ನಳ ಮತ್ತು ದಮಯಂತಿ ಪ್ರಯಾಣ ಮಾಡುತ್ತ ಹಲವು ಯೋಜನಗಳ (ನಾಲ್ಕು ಹರದಾರಿ ಸುಮಾರು ೧೨ ಮೈಲು) ದೂರ ಸಾಗಿದರು. ಅವರ ವಿಧಿಯನ್ನು ಏನೆಂದು ಹೇಳುವುದು? ಗಂಟಲುಗಳು ಒಣಗಿದವು. ದಮಯಂತಿಯ ಕಾಲೊಡೆದು ಸುರಿದ ರಕ್ತದಿಂದ ದಾರಿ ಕೆಸರಾಯಿತು. ಎಳೆ ಬಾಳೆಯ ಸುಳಿಯು ಬೆಂಕಿಯ ಝಳಕ್ಕೆ ಬೆಂದಂತೆ ತುಂಬಾ ಬಳಲಿದ ಅವಳನ್ನು ನೋಡಿ ನಳನು ಮರುಗಿದನು. ಮನೋಹರವಾದ ಬಂಗಾರದ ತೂಗುಮಂಚದಲ್ಲಿ ಹೊಳೆವ ಹಾಸಿಗೆಯ ಮೇಲೆ ಮಲಗುವ ಲಲನೆಗೆ ಈ ವಿಧಿ ಬಂದಿತೇ ಎಂದು ನಿಟ್ಟುಸಿರು ಬಿಟ್ಟನು.

## ವಿಧಿ ಬರೆದ ಬರೆಹವ ತಪ್ಪಿಸಲು ಹರಿಹರವಿರಿಂಚಾದಿಗಳಿಗಳವೇ?

ಅದನ್ನು ಗಮನಿಸಿದ ದಮಯಂತಿಯು ನುಡಿದಳು ;

'ಅರಸ, ಸಂಕಟಪಡುವೆಯೇಕೆ? ವಿಧಿ ಬರೆದ ಬರೆಹವನ್ನು ತಪ್ಪಿಸಲು ಹರಿಹರ ಬ್ರಹ್ಮಾದಿಗಳಿಗೂ ಸಾಧ್ಯವಿಲ್ಲ. ಹೀಗಿರುವಾಗ ನಮ್ಮ ಪಾಡೇನು?'

'ಸಮೃದ್ಧತೆಯನ್ನು ವಿಧಿ ಸೈರಿಸದೆ ಹೋಯಿತು.'

'ಹಾಗೆನ್ನಬೇಡ ಎನ್ನರಸ. ಸಿರಿ ಅಳಿಯುತ್ತದೆ. ಮರುಕ್ಷಣ ತುಂಬಿ ಗೋಚರಿಸುತ್ತದೆ. ಅದು ಶಾಶ್ವತವಲ್ಲ. ಇದು ಗೊತ್ತಿದ್ದು ನೀನು ನೋಯುವುದೇಕೆ?'

ಅವಳ ಸಮಧಾನದ ನುಡಿ ಆಲಿಸುತ್ತ, ಮನದಲ್ಲಿ ರೋಧಿಸಿದನು. ಘನಘೋರ

ಅಡವಿಯಲ್ಲಿ ಹಾಗೆ ಸಾಗಿ ಬರುತ್ತಿರಲು ಜಗನ್ಮೋಹನವಾದ ಪಕ್ಷಿಗಳು ಕಂಡವು. ಅವು ಭೂಮಿಗೆ ಇಳಿಯಲು ಅಪೇಕ್ಷಿಸುತ್ತಿರುವುದನ್ನು ನಳನು ನೋಡಿದನು. ಅವುಗಳನ್ನು ಹಿಡಿಯಲು ತನ್ನ ಮೈ ಮೇಲಿನ ವಸ್ತ್ರವನ್ನು ಬೀಸಿದನು. ಅವು ಆ ವಸ್ತ್ರವನ್ನು ಎತ್ತಿಕೊಂಡು ಆಕಾಶಕ್ಕೆ ಹಾರಿದವು!

ಅದನ್ನು ಕಂಡು ಅವನು ಆಶ್ಚರ್ಯಪಟ್ಟನು. ಮೂಗಿನ ಮೇಲೆ ಬೆರಳಿಟ್ಟು ನಸುನಗುತ್ತ ನಿಂತನು. ಆಗ ಆ ಮನೋಹರ ಸೌಂದರ್ಯದ ಜೋಡಿ ಹಕ್ಕಿಗಳು ಬಂದು 'ನಿನ್ನ ನಿರಂತರ ರಾಜ್ಯಭೋಗವನ್ನು ಅಪಹರಿಸಿದವರು ನಾವು. ಇದನ್ನು ತಿಳಿದಿರು' ಎಂದು ಹೇಳಿ ಮಾಯವಾದವು.

## ಸೀರೆಯ ಸೆರಗ ಹರಿದಿತ್ತಳು ನೃಪಾಲಗೆ

ಧರಣಿಪತಿ ಧರ್ಮರಾಯನೇ ಕೇಳು. ನಳನಿಗೆ ಕಲಿಪುರುಷನ ಮಾಯೆಯ ಬಗ್ಗೆ ಏನೂ ತಿಳಿಯದು. ಅವನ ಮನಸ್ಸು ತಳಮಳಗೊಂಡು ಮಂಕು ಬಡಿದಂತಾಗಿ ಬತ್ತಲೆ ನಿಂತಿದ್ದನು! ಅದನ್ನು ಕಂಡ ಸತಿ ದಮಯಂತಿಯು ಸೀರೆಯ ಸೆರಗನ್ನು ಹರಿದು ರಾಜನಿಗೆ ನೀಡಿದಳು! ಆಗ ತನ್ನ ಮೈಮೇಲೆ ವಸ್ತ್ರವಿಲ್ಲದ್ದು ಗೊತ್ತಾಗಿ ಶಿರ ಬಾಗಿಸಿದನು. ನಾಚಿ ನಿಟ್ಟುಸಿರು ಬಿಡುತ್ತ ಹೇಳಿದನು :

'ಭೂಲೋಕದ ರಾಜರಿಗೆ ನಿಷಧ ಚಕ್ರವರ್ತಿಯ ಅರಮನೆಯ ಬಾಗಿಲಿನ ಪ್ರವೇಶ ಸಿಗುವುದೇ ಪುಣ್ಯ ಎನ್ನುವ ರೀತಿ ಮೆರೆದ ರಾಜ್ಯ ವೈಭೋಗ ನಮ್ಮದು. ಅದು ಇಲ್ಲವಾಯಿತು. ಸಮಸ್ತ ರಾಜ್ಯದ ಸಿರಿಯಿಂದ ವಂಚಿತನಾಗಿ ಪತ್ನಿಯ ಸೀರೆ ಉಡುವಂತಾಯಿತು ಹರಹರ! ಮಹಾದೇವ!!'

'ಆ ಸೀರೆ ನೀವು ನೀಡಿದ್ದಲ್ಲವೆ?'

'ಓ ಪ್ರಿಯೆ, ಭೂಮಿಯ ಸಂಪತ್ತಿನ ಅಷ್ಟಭೋಗವನ್ನು ಕಳೆದುಕೊಂಡೆ. ನನ್ನ ಮಕ್ಕಳನ್ನು ಮಿತ್ರರನ್ನು ತೊರೆದೆ. ನಂಬಿದ ಸತಿಯನ್ನು ಘೋರಾರಣ್ಯದ ಮಧ್ಯದಲ್ಲಿ ಅತಿಯಾಗಿ ಬಳಲಿಸಿ ನೋಯಿಸಿದೆ. ಮನದನ್ನೆ, ನನ್ನಂತಹ ಪಾಪಿಗಳು ಯಾರೂ ಇಲ್ಲ. ನನ್ನನ್ನು ಬಿಟ್ಟು ನಿನ್ನ ತಂದೆಯ ಮನೆಗೆ ಹೋಗು.'

ತನ್ನ ಪ್ರಿಯನಲ್ಲಿನ ನುಡಿ ಕೇಳಿ ದಮಯಂತಿ ಕೋಪಗೊಂಡು ದುಃಖಿಸುತ್ತ ;

'ನೀವು ಹೀಗೆ ಮುನಿದು ಮಾತಾಡಿದರೆ ನನಗಿನ್ನಾರು ಗತಿ? ಪ್ರತಿ ದಿನವು, ನಿಮ್ಮ ಪಾದ ಪದ್ಮಗಳನ್ನು ಪೂಜಿಸುವುದನ್ನು ತೊರೆದು ನನ್ನ ತನುವಿರದು' ಎಂದು ಹೇಳಿ ಕಣ್ಣೀರನ್ನು ಒರೆಸಿಕೊಳ್ಳುತ್ತ ಮತ್ತೆ ಮಾತು ಮುಂದುವರೆಸಿ,

'ನೆರಳು ತನುವಿನ ಬಳಿಯೇ ಚಲಿಸುತ್ತದೆ ಹೊರತು ಬೇರೆಯಾಗಿ ಅಲ್ಲ. ನಿಮ್ಮ ಪಾದದ ನೆರಳಿನಲ್ಲಿ ನಾನಿರುವೆ. ನನಗೆ ಈ ಅಡವಿಯೇ ಅರಮನೆ' ಎಂದು ನುಡಿದು ಬಾಗಿ ಪತಿಯ ಪಾದಗಳಿಗೆ ನಮಸ್ಕರಿಸಿದಳು.

ತನ್ನ ಕಣ್ಣೀರನ್ನು ಒರೆಸಿಕೊಳ್ಳುವಾಗ ಕೈಮೇಲೆ ಹನಿದ ನಳನ ಕಂಬನಿ ನೋಡಿ ಕತ್ತೆತ್ತಿ 'ಇದು ಪೂರ್ವಜನ್ಮದ ಕರ್ಮಫಲ. ಚಿಂತಿಸಿ ಫಲವೇನು? ಇಂದಿನಿಂದ ನಿರ್ಮಲ ಚಿತ್ತದಲ್ಲಿ ನಿಮ್ಮೊಡನೆ ಕಾನನದಲ್ಲಿ ಸಂಚರಿಸುತ್ತೇನೆ' ಎಂದು ಹೇಳಿ ನಿಂತಳು. ಅವಳನ್ನು ಸೆಳೆದುಕೊಂಡು ಮುಖವೆತ್ತಿ ನೋಡುತ್ತ, 'ಶೋಕವೇಕೆ ತರುಣಿ? ಬಾ' ಎಂದು ತೋಳುಗಳಿಗೆ ತೋಳಬಂಧಿ, ಕೆನ್ನೆ ತುಂಬ ಮುತ್ತು ನೀಡಿ ಬಿಗಿಯಾಗಿ ಅಪ್ಪಿಕೊಂಡನು.

ಕಂಬನಿಯನ್ನು ಸೆರಗಿನಿಂದ ಒರಸಿ ಜಾಗ್ರತೆಯಾಗಿ ಕುಳಿತು, ತನ್ನ ತೊಡೆಯೊಳಗೆ ಕುಳ್ಳಿರಿಸಿಕೊಂಡನು. ಅವಳ ಕಣ್ಣ ಕನ್ನಡಿಯಲ್ಲಿ ತನ್ನ ಪ್ರತಿಬಿಂಬ ತುಂಬಿಕೊಂಡು, 'ಹುಚ್ಚಿ! ದುಗುಡವನ್ನು ತೊರೆ' ಎಂದು ಹೇಳುತ್ತ, ಅಪ್ಪಿ ಮುದ್ದಾಡಿದನು.

ಸತಿಯನ್ನು ಸಂತೈಸಿ, ಶ್ರೀಹರಿಯನ್ನು ನೆನೆಯುತ್ತ ಮುಂದೆ ಸಾಗುತ್ತಿರಲು ಭಯಂಕರ ಗೊಂಡಾರಣ್ಯ ಎದುರಾಯಿತು. ಕ್ರೂರ ಖಗಮೃಗಗಳಿರುವ ಕಾಡನ್ನು ಅವರು ಸೇರಿದಂತೆ ಅರವಿಂದ ಸಖನಾದ ಸೂರ್ಯನು ಪಶ್ಚಿಮದ ಕಡಲಲ್ಲಿ ಇಳಿದನು. ಲೋಕಾಧಿಪತಿ ನಳನ ರಾಣಿಗೆ ಶೋಕ ಹೆಚ್ಚಿದ ರೀತಿಯಲ್ಲಿ ಕತ್ತಲೆ ಲೋಕವನ್ನು ಮುಸುಕಿತು – ಭರಣಿ ಮುಚ್ಚುವಂತೆ. ಭೀಕರ ಧ್ವನಿಗಳಿಗೆ ಹೆದರಿದ ದಮಯಂತಿಯನ್ನು ವಿವೇಕನಿಧಿ ನಳನು ಸಮಾಧಾನಗೊಳಿಸಿದನು. ಬಿಗಿದಪ್ಪಿಕೊಂಡು ನೆತ್ತಿಯ ಮೇಲೆ ಬಾಯಿಯಿಂದ ಉರುಬುತ್ತ ಶಾಂತವಾಗಿಸಿ,

'ದಮಯಂತಿ ಹೆದರಬೇಡ, ಭಯಪಡಬೇಡ. ಇದು ವಿಧಿ ಬರೆದ ಬರೆಹ' ಎಂದು ಹೇಳುತ್ತ ತರಗೆಲೆಯ ಹಾಸಿನಲ್ಲಿ ಮಲಗಿಸಿದನು. ಅವಳನ್ನೇ ನೋಡುತ್ತ 'ರತ್ನ ಮಂಚದಲ್ಲಿ ಮಲಗಿ ಪರಮ ಸುಖದಲ್ಲಿದ್ದ ಸತಿಗೆ ವಿಧಿ ಹೀಗೆ ಮಾಡಿತಲ್ಲ! ಹರಹರ!!' ಎಂದು ಮರುಗಿ ಕಂಬನಿದುಂಬಿದನು.

ಅವನ ಮನಸ್ಸು ಹಲವು ಆಲೋಚನೆಗಳ ಬೀಡಾಯಿತು. ಅವಳು ತನ್ನನ್ನು ರಾಜಹಂಸಗಳ ನುಡಿಯಿಂದ ಮೆಚ್ಚಿ ಕೈಹಿಡಿದು ತನ್ನನ್ನೆ ಸದಾ ಧ್ಯಾನಿಸುವುದನ್ನು ನೆನೆದನು. ಇವಳು ಎಲ್ಲಾ ಪತಿವ್ರತಾ ಸ್ತ್ರೀಯರಿಗಿಂತ ತುಸು ಹೆಚ್ಚು – ನನ್ನನ್ನು ಬಿಟ್ಟಿರುವವಳಲ್ಲ ಎಂದು ಹರ್ಷಗೊಂಡನು. ಮತ್ತೆ ಚಿಂತೆಗೆ ಒಳಗಾದನು. ಇವಳಿಗೆ ಗೊತ್ತಾಗದಂತೆ ನಾನು ಕಾಣದೆ ಹೋದರೆ ಆಗ ತನ್ನ ತಂದೆಯ ಮನೆಗೆ ಹೋಗುತ್ತಾಳೆ. ತಾನಿದ್ದರೆ ತನ್ನನ್ನು ಖಂಡಿತ ಬಿಡಳು – ಎಂದು ಆಲೋಚಿಸಿ ಅವಳನ್ನು ನಿದ್ರೆ ಹೋಗುವಂತೆ ಮಾಡಿದನು.

ಮೈಮರೆತು ಮಲಗಿದವಳ ಮಗ್ಗುಲ ಸೆರಗನ್ನು ಮೆಲ್ಲನೆ ಬಿಡಿಸಿಕೊಂಡನು. ಆ ವಸ್ತ್ರವನ್ನು ತೆಗೆದುಕೊಂಡು, ಮಲಗಿದ್ದ ಸತಿಯನ್ನು ನೋಡುತ್ತ ಮನದಲ್ಲಿ ಮರುಗಿದನು. 'ಹರಿಹರಿ!! ವರ ಜಗತ್ಪತಿ ಅಡವಿಯಲ್ಲಿ ಇವಳನ್ನು ಎಚ್ಚರಿಸದೆ ತಾನು ಹೋಗುವುದು ಹೇಗೆ?' ಎಂದು ದೀರ್ಘವಾಗಿ ಉಸಿರುಬಿಟ್ಟನು.

ಮಡದಿಯನ್ನು ಬಿಟ್ಟು ಹತ್ತೆಂಟು ಅಡಿ ಹೆಜ್ಜೆ ಇಟ್ಟು, ಮನಸ್ಸು ತಾಳಲಾರದೆ ಮರಳಿ ಬಂದನು. ತದೇಕಚಿತ್ತದಿಂದ ಕಣ್ಣು ಮಿಟುಕಿಸದೆ ಆ ಚಂದ್ರಮುಖಿಯನ್ನು ಕಣ್ತುಂಬಿ ಕೊಂಡನು. ಒತ್ತಿ ಬರುವ ದುಃಖದಲ್ಲಿ ಮೆಲ್ಲನೆ ಸಾಗಿ ಮತ್ತೆ ಸತಿಯನ್ನು ನೋಡಲು ಮರಳಿದನು. ಕೊನೆಗೆ ಗಟ್ಟಿ ಮನಸ್ಸು ಮಾಡಿಕೊಂಡು ಅತಿಶೋಕಕ್ಕೊಳಗಾಗಿ ಯೋಜನ ದೂರ ನಡೆದುಹೋದನು.

## ಕರಗಿತರಸನ ಧೈರ್ಯ ಚಿತ್ತದಿ ಮುರಿದುದಗ್ಗದ ಮಹಿಮೆ

ನಳನ ಮನಸ್ಸು ಒಮ್ಮೆ ಮರುಗಿತು, ಕಂಗಳು ನೋಡಲು ಬಯಸಿತು. ಅವಳು ತನ್ನೊಡನೆ ಇಲ್ಲವಲ್ಲ ಎಂದು ಅವನ ಹೃದಯ ಕಳವಳದ ಬೀಡಾಯಿತು. ಅರಸನಾದ ಅವನ ಧೈರ್ಯ ಉಡುಗಿಹೋಯಿತು. ಅವನ ಚಿತ್ತದಲ್ಲಿ ತಾನು ಶ್ರೇಷ್ಠನೆಂಬ ಮಹಿಮಾಭಾವ ಮುರಿದು ಬಿತ್ತು. ಶೋಕದ ಭಾರದಲ್ಲಿ ಕಳವಳಗೊಂಡು ಕತ್ತಲ ಕಾಡಲ್ಲಿ ಸಾಗಿದನು.

ಧರ್ಮರಾಯನೇ ಕೇಳು. ನಳಮಹಾರಾಜನು ಕರುಣೆ ತೋರದೆ ಸತಿಯನ್ನು ಕಾಡಿನಲ್ಲಿ ತೊರೆದು ಬಿಟ್ಟನು. ಆ ಕಾಡಿನಲ್ಲಿ ಅವಳು ಹುಲಿ ಕರಡಿಗಳ ಉಪಟಳವನ್ನು ಹೇಗೆ ಸೈರಿಸಿಕೊಳ್ಳುವಳೋ ಅವಳ ಮೊರೆಯ ಲಾಲಿಸಿ ನೋಡುವೆ ಎಂದು – ಅತಿ ಪ್ರೇಮದಿಂದ ಬಂದು, ಕಮಲಮುಖಿಯನ್ನು ಎಚ್ಚರಿಸುವ ರೀತಿ ಸೂರ್ಯನು ಪೂರ್ವದಲ್ಲಿ ತಲೆದೋರಿದನು.

ಆಗ ದಮಯಂತಿ ಮೈಮುರಿದು ನಿದ್ರೆಯಿಂದ ಎಚ್ಚೆತ್ತಳು. ಮೆಲ್ಲನೆ ಎಡ ಬಲವನ್ನು ನೋಡಿ ಪತಿಯನ್ನು ಕಾಣದೆ ಆತಂಕಗೊಂಡು ಮೂರ್ಛೆಗೊಳಗಾಗಿ ಮೈಮರೆತು ಮಲಗಿದಳು. ಮರು ನಿಮಿಷದಲ್ಲಿ ಎಚ್ಚರಗೊಂಡು ಸುತ್ತಮುತ್ತ ನೋಡಿ ಎಲ್ಲಿಯೂ ಕಾಣದಿರಲು ಆ ಬೆಟ್ಟ ಹೆಮ್ಮರಗಳ ಭೀಕರ ಅರಣ್ಯದ ಮಧ್ಯದಲ್ಲಿ ರೋಧಿಸಿದಳು. ದುಃಖ ಹೊಮ್ಮಿ ಬರಲು 'ಹಾ ರಮಣ ನಳನೃಪತಿ. ಹಾ ರಣಧೀರ, ಸದ್ಗುಣಿ, ವೈರಿಸಂಹಾರ, ದಾನಶೂರ, ಸತ್ಯ ಹಾಗೂ ನಿರ್ಮಲನೇ ಈ ಘೋರ ಕಾನನದಲ್ಲಿ ನಿನ್ನನ್ನು ನಂಬಿದವಳನ್ನು ಬಿಟ್ಟು ಹೋಗುವರೇ? ನನಗಿನ್ನಾರು ಗತಿ? ನಿನ್ನ ಮುಖತೋರು' ಎಂದು ಗೋಳಿಟ್ಟಳು.

ಒತ್ತರಿಸಿ ಬರುವ ಆತಂಕದಲ್ಲಿ ಕಾಡಿನಲ್ಲಿ ಅಲೆದಾಡುತ್ತ 'ಮೆಟ್ಟಿ ಬರುತ್ತಿರುವ ಆಪತ್ತಿನಲ್ಲಿ

ನಾನು ಭೂಮಿಯ ಒಳಗೆ ಇಳಿಯಲೇ? ಬೆಂಕಿಗೆ ಆಹುತಿಯಾಗಲೇ? ಕಾಳವಿಷದ ಮಡುವಿನಲ್ಲಿ ಮುಳುಗಲೇ? ಹಾಸು ಬಂಡೆಗೆ ತಲೆ ಚಚ್ಚಿಕೊಳ್ಳಲೇ? ವಿಷ ಕುಡಿದು ಪ್ರಾಣಕಳೆದುಕೊಳ್ಳಲೇ?' ಎಂದು ಶೋಕಿಸುತ್ತ, ಸುತ್ತಲೂ ನೋಡಿ 'ರಾಜ ಹಂಸಗಳೇ ನೀವು ನನ್ನ ಪತಿಯನ್ನು ನೋಡಿದಿರಾ? ಗಿಳಿ ಕೋಗಿಲೆಗಳೇ ನೀವು ನನ್ನ ಪ್ರಿಯನನ್ನು ನೋಡಿದಿರಾ? ಮೃಗ ಪಕ್ಷಿಗಳೇ ನೀವು ನಳಚಕ್ರವರ್ತಿಯನ್ನು ನೋಡಿದಿರಾ?' ಎಂದು ನಿಸರ್ಗ ಚೇತನಗಳನ್ನು ಪ್ರಶ್ನಿಸುತ್ತ ಹಲವು ಬಗೆಯಲ್ಲಿ ನೊಂದಳು. ತಲೆ ಕೆದರಿಕೊಂಡು ಮಣ್ಣಿನಲ್ಲಿ ಹೊರಳಾಡಿದಳು.

## ಧರೆಯೊಳಗಡವಿ ಪಾಲಾಗೆಂದು ಪಡೆದಳೊ ತನ್ನ ನಿಜಜನನಿ

'ಅಯ್ಯೋ, ನನ್ನನ್ನು ನನ್ನವ್ವ ಈ ಧರೆಯಲ್ಲಿ ಅಡವಿ ಪಾಲಾಗೆಂದು ಹೆತ್ತಳೇ? ಈ ಜಗದಲ್ಲಿ ನನ್ನಂತೆ ಪತಿಗೆ ಈ ಒಡಲನ್ನು ಒಪ್ಪಿಸಿದವರು ಇರುವರೇ? ನನ್ನ ನಲ್ಲ, ಪ್ರಿಯ ನಳ ಒಮ್ಮೆ ನಿನ್ನ ಮುಖ ತೋರಿಸು' ಎಂದು ಆರ್ತಳಾಗಿ ಗೋಳಿಟ್ಟಳು.

ಧರ್ಮರಾಜನೇ ಕೇಳು. ಹೀಗೆ ದಮಯಂತಿ ಪತಿಗಾಗಿ ಹಂಬಲಿಸುತ್ತ ಮುಗಿಲು ನೋಡಿ ಮೊರೆಯಿಡುತ್ತ ಬರುವಾಗ ಮತ್ತೊಂದು ಕಂಟಕ ಎದುರಾಯಿತು. ದಾರಿಯಲ್ಲಿ ತರಗೆಲೆಯ ಹಕ್ಕೆಯಲ್ಲಿ (ನೆಲೆ; ಆಶ್ರಯಸ್ಥಾನ) ಮಹಾಸರ್ಪವು ಒಳ್ಳೆಯ ನಿದ್ದೆ ಮಾಡುತ್ತ ಮೌನವಾಗಿ ಬಿದ್ದುಕೊಂಡಿತ್ತು. ದಮಯಂತಿಯು ಸರ್ಪವನ್ನು ಕಾಣದೆ ತುಳಿದುಬಿಟ್ಟಳು. ತಕ್ಷಣ ಆ ಹಾವು ಕೋಪಗೊಂಡು ವಿಷಕಾರಿತು. ರೌದ್ರ ರೂಪಿನಿಂದ ಅವಳನ್ನು ಹಿಡಿದು – ಚಂದ್ರನನ್ನು ನುಂಗುವ ರಾಹುವಿನಂತೆ – ನುಂಗತೊಡಗಿತು.

ದಮಯಂತಿಯು ಭಯಭೀತಳಾಗಿ 'ಹಾ ರಮಣ ನಳ ನೃಪತಿಯೇ, ನನ್ನನ್ನು ಯಾರ ವಶ ಮಾಡಿ ಹೊರಟುಹೋದೆ? ಹರಿಹರಿ!! ಕ್ರೂರ ಸರ್ಪನ ಬಾಯ್ಗೆ ತುತ್ತಾದೆ. ಜಗನ್ನಾಥ ಯಾರಿಗೆ ನನ್ನ ಈ ಹೀನ ದೆಸೆಯನ್ನು ಕೂಗಿ ಹೇಳಿಕೊಳ್ಳಲಿ? ನನ್ನ ಪ್ರಾಣವನ್ನು ಯಾರು ಕಾಪಾಡುವರು? ಅಕಟಕಟ! ಕೃಷ್ಣ, ಮುಕುಂದ ಕಾಪಾಡು' ಎಂದು ಕೂಗಿಕೊಂಡಳು.

ಆ ಕಾಡಿನ ಬೆಟ್ಟದ ತುದಿಯಲ್ಲಿದ್ದ ಓರ್ವ ಬೇಟೆಗಾರನಿಗೆ ಆ ಕೂಗು ಕೇಳಿಸಿತು. ತಕ್ಷಣ ಅವನು ಬಿಲ್ಲು ಬಾಣಗಳೊಡನೆ ಅಲ್ಲಿಗೆ ಬಂದನು. ಲತಾಂಗಿ ದಮಯಂತಿಯನ್ನು ಹಿಡಿದು ನುಂಗುವ ಕಾಳ ಸರ್ಪವನ್ನು ಕಂಡನು. ಕತ್ತಿಯಿಂದ ಅದನ್ನು ಕತ್ತರಿಸಿ ಅವಳನ್ನು ಉಳಿಸಿದನು.

ಅದನ್ನು ನೋಡಿದ ದೇವತೆಗಳು ಹಾಹಾ!! ಎಂದು ಸಂತೋಷ ವ್ಯಕ್ತಪಡಿಸಿದರು.

ಧರ್ಮರಾಜನೇ ಕೇಳು. ದಮಯಂತಿಗೆ – ರಾಹುವಿನ ಕಟವಾಯಿಯಲ್ಲಿ ಸಿಲುಕಿದ ಚಂದ್ರನನ್ನು ಹೊರಗೆಳೆದು ತಂದಂತಾಯಿತು. ಮೂರ್ಛೆ ಹೋಗಿದ್ದ ಅವಳು ಬೇಡನ ಮಂತ್ರದಿಂದ ಎಚ್ಚರಗೊಂಡಳು. ಅಲ್ಲಿ ಒಂದು ಕೆಂದಾವರೆಯ ಕೊಳದಲ್ಲಿ ಮಿಂದು ನಿಂತುಕೊಂಡಳು.

ಆಗ ಆ ಬೇಡ 'ನೀನು ನನಗೆ ಹೆಂಡತಿಯಾಗು' ಎಂದು ಕೇಳಿಕೊಳ್ಳಲು, ಸಿಟ್ಟುಗೊಂಡ ದಮಯಂತಿಯು 'ನೀನು ನನಗೆ ಪ್ರಾಣವನ್ನಿತ್ತು ಸಲಹಿದ ತಂದೆಯಲ್ಲವೇ? ನಾನು ಕೋಪಗೊಂಡರೆ ನಿನಗೆ ಶಾಪವನ್ನು ಕೊಡುವೆನು, ಇಲ್ಲಿಂದ ಹೋಗು' ಎಂದು ಹೇಳಿದಳು. ಆ ನುಡಿ ಕೇಳಿ ಭಯಗೊಂಡ ಬೇಡನು ತಲೆ ಬಾಗಿಸಿ ಹೊರಟು ಹೋದನು.

ದಮಯಂತಿಯು ತನ್ನ ಪತಿಯನ್ನು ನೆನೆದು ಹಂಬಲಿಸುತ್ತ ಮನದಲ್ಲಿಯೇ ಮರುಗಿದಳು. ಕಾಡಿನಲ್ಲಿ ಅಲೆದಾಡಿ ಹುಡುಕಿದಳು. ಅವನು ಎಲ್ಲಿಯೂ ಕಾಣದಿರಲು ಶೂನ್ಯ ಭಾವಸ್ಥಿತಿಗೆ ಒಳಗಾದಳು. ಕಣ್ಣೀರ ಕೋಡಿಯಲ್ಲಿ ಮುಂದೆ ಸಾಗಿದಳು.

ಅರಸನೇ ಆಶ್ಚರ್ಯವನ್ನು ಕೇಳು ಅವಳು ಕಾಡಿನಲ್ಲಿ ನಡೆದು ಹೋಗುತ್ತಿರಲು ಅವಳ ಪಾತಿವ್ರತ್ಯ ಮಹಿಮೆಗೆ ಅಲ್ಲಿದ್ದ ಭೂತ ಬೇತಾಳಗಳು ತೊಲಗಿ ಹೋದವು. ಕ್ರೂರ ಪ್ರಾಣಿಗಳಾದ ಶರಭ, ಕಾಡಾನೆ, ಸಿಂಹಗಳು ಅಲ್ಲಿಂದ ದೂರ ಸರಿದವು.

## ಮುನ್ನೇನ ನೋಂತೆನೊ ಪತಿಯಗಲಿ ಘನ ಕಾನನಕೆ ಗುರಿಯಾದೆ

ದಮಯಂತಿಯು ಹಾಗೆ ಸಾಗುತ್ತ, ತೇಜಸ್ವಿ ತಪಸ್ವಿಗಳ ಸಮೂಹ ಒಂದನ್ನು ಕಂಡಳು. ಕಣ್ಣೀರು ಸುರಿಸುತ್ತ ಬಂದ ಅವಳನ್ನು ಆ ಕರುಣಾಳು ಮುನಿಗಳು ಕೇಳಿದರು,

'ತಾಯಿ ನೀನಾರು? ಇಲ್ಲಿಗೆ ಬಂದ ಕಾರಣವೇನು?'

'ಪೂಜ್ಯರೇ, ನಾನು ಪುಣ್ಯಹೀನೆ. ನನಗಾದ ನಷ್ಟವನ್ನು ಏನೆಂದು ಹೇಳಲಿ. ನಳ ಚಕ್ರವರ್ತಿಯನ್ನು ನೀವು ಬಲ್ಲಿರೇ? ಆ ನರೇಂದ್ರನ ಪತ್ನಿ ನಾನು? ಹಿಂದಿನ ಜನ್ಮದಲ್ಲಿ ಯಾವ ವ್ರತ ಕೈಗೊಂಡೆನೊ ಈ ಜನ್ಮದಲ್ಲಿ ಪತಿಯನ್ನು ಅಗಲಿ ಕಾಡು ಪಾಲಾದೆ' ಎಂದು ಹೇಳಿ ದಮಯಂತಿ ನಿಟ್ಟುಸಿರುಬಿಡುತ್ತ ಮಾತು ಮುಂದುವರೆಸಿ, 'ನನ್ನ ಪತಿಯು ರಾಜ್ಯವನ್ನು ಜೂಜಿನಲ್ಲಿ ಪುಷ್ಕರನಿಗೆ ಸೋತನು. ಸತ್ಯಮಾರ್ಗಿಯಾದ ಅವನು ಪಣದ ಪ್ರಕಾರ ವನವಾಸ ಕೈಕೊಂಡನು. ಇಲ್ಲಿ ನನ್ನನ್ನು ಅಗಲಿ ಹೋದನು. ಪತಿಯನ್ನು ಕಾಣದೆ ಭೀತಿಯಿಂದ ಶಕ್ತಿಗುಂದಿದೆ. ಈಗ ತಮ್ಮ ಚರಣ ದರ್ಶನವಾಯಿತು. ಭೂತ ದಯೆಯುಳ್ಳ ತಾವು ನನ್ನನ್ನು ಕಾಪಾಡಿ' ಎಂದು ಪ್ರಾರ್ಥಿಸಿದಳು.

ದಮಯಂತಿಯ ಕರುಣಾಜನಕ ಸ್ಥಿತಿಗೆ ಅವರ ಅಂತಃಕರಣ ಕರಗಿತು. ಅವರು

'ತಾಯೆ, ಕೋಪಗೊಂಡು ಕಂಗೆಡಬೇಡ. ನಿನಗೆ ನಿನ್ನ ಗಂಡ ಮತ್ತು ಮಕ್ಕಳು, ರಾಜ್ಯಸಿರಿ ಮತ್ತೆ ದೊರಕುವುದು. ಇದನ್ನು ನಾವು ಯೋಗ ಧ್ಯಾನದಿಂದ ತಿಳಿದೆವು. ಧೈರ್ಯಗುಂದಬೇಡ' ಎಂದು ಹೇಳಿ ಅದೃಶ್ಯರಾದರು.

ಅಕಟಕಟ! ಇದು ಕನಸಿನ ರೀತಿ ಆಯಿತಲ್ಲ! ಮುನಿಗಳು ಅಗೋಚರವಾದುದು ವಿಸ್ಮಯ! ಎಂದು ದಮಯಂತಿ ಬೆರಗಾದಳು! ಅವಳು ಪತಿಯನ್ನು ಕಾಣದೆ ತೊಳಲಾಡುತ್ತ ಕಾತುರದಿಂದ ಬರುತ್ತಿರುವುದನ್ನು ಹೊಸಬರಾದ ವ್ಯಾಪಾರಿಗಳು ನೋಡಿದರು. ನೋಡ ನೋಡುತ್ತ –ಇವಳು ವನ ದೇವತೆಯೋ? ದೇವತಾ ಸ್ತ್ರೀಯೋ? ಮನ್ಮಥನ ಸತಿ ರತಿಯೋ? ಸರಸ್ವತಿಯೋ? ಅಥವಾ ರಾಕ್ಷಸಿಯೋ? ಇವಳು ಯಾರ ಪತ್ನಿಯೋ? ಮಾಯಾ ರೂಪಿನ ಭೂರಿ ಭೂತವೋ? ತಿಳಿಯಲಾರದು – ಎಂದು ಭಯಗೊಂಡು ಆ ಬಣಜಿಗರು ಓಡಿದರು.

ಅವಳು ಭೀತಿಯಿಂದ ಓಡುತ್ತಿರುವ ವೈಶ್ಯರ ಹೇಡಿತನ ಕಂಡು ನಸುನಗುತ್ತ, ಅವರ ಬಿಡಾರದಲ್ಲಿಗೆ ಬಂದಳು. ಅವರನ್ನು ಮಾತಾಡಿಸುತ್ತ 'ನೀವೇಕೆ ಓಡುತ್ತಿರುವಿರಿ? ನಾನು ನಿಮಗೆ ತೊಂದರೆ ಮಾಡುವವಳಲ್ಲ. ನಾನು ಜಗತ್ತಿನ ಹೆಸರುವಾಸಿ ರಾಜ ನಳನೃಪನ ಮಡದಿ' ಎಂದು ಹೇಳಿ ಅವರ ಕುತೂಹಲದ ಮೌನ ತಣಿಸಲು ತನ್ನ ನೋವಿನ ಮಿಡಿತದ ಮಾತು ಮುಂದುವರೆಸಿ 'ವೀರಸೇನನ ಮಗ ನಳನೃಪ ಜೂಜಿನಲ್ಲಿ ರಾಜ್ಯವನ್ನು ಸೋತ. ಆ ಕಾರಣದಿಂದ ಕಾಡಿಗೆ ಬಂದು ನನ್ನನ್ನು ಅಗಲಿಹೋದ. ನಾನು ದಾರಿ ತಪ್ಪಿದೆ. ಪರದೇಶಿಯಾದೆ. ತಾವು ನನಗೆ ಯಾವುದಾದರೂ ಒಂದು ಊರನ್ನು ತೋರಿಸಿ' ಎಂದು ದುಃಖದಿಂದ ಕಣ್ಣೀರು ಸುರಿಸಿ ಕೇಳಿಕೊಂಡಳು. ಆ ಬಣಜಿಗರು,

'ತಾಯಿಯೇ, ನಮಗಿಂದು ನಿಮ್ಮ ಪಾದದ ದರ್ಶನವಾಯಿತು. ನಾವು ಧನ್ಯರು. ನಿಮ್ಮನ್ನು ವಿಧಿ ಈ ಅವಸ್ಥೆಗೆ ತಂದಿತೇ? ನೋಯದಿರಿ. ಮುಂದೆ ಚೈದ್ಯ ಪಟ್ಟಣವಿದೆ' ಎಂದು ಧೈರ್ಯದ ಮಾತಾಡುತ್ತಿರಲು ಸೂರ್ಯನು ಪಶ್ಚಿಮಾಂಬುದಿಗೆ ಇಳಿದನು.

ಹಗಲು ಸವೆಯಿತು. ಹೊಂಬಿಸಿಲು ಹಿಮ್ಮೆಟ್ಟಿತು. ಕತ್ತಲೆ ಭೂಮಿಯನ್ನು–ಪೆಟ್ಟಿಗೆ ಮುಚ್ಚುವ ರೀತಿಯಲ್ಲಿ ಆವರಿಸಿತು. ಸುಗುಣೆ ದಮಯಂತಿಯನ್ನು ನೋಡಲು ಆಶಿಸಿ ಬಂದ ದೇವತೆಗಳಂತೆ ಆಕಾಶದಲ್ಲಿ ನಕ್ಷತ್ರಗಳು ಮೂಡಿ ಪ್ರಜ್ವಲಿಸಿದವು.

ಅವನಿಪ ಧರ್ಮಜನೇ ಕೇಳು. ವೈಶ್ಯರು ಒಂದು ಕಡೆ ಗೂಡಾರವನ್ನು ಹಾಕಿ ಬೀಡುಬಿಟ್ಟು ಮಲಗಿದರು. ರಾತ್ರಿಯಲ್ಲಿ ಅವರ ಗಡುವಿನ ದಿನ ಬಂದಿತೋ ಎಂಬಂತೆ ಆನೆಗಳ ಹಿಂಡು ಬಂದಿತು. ಅವು ಬಾಯಾರಿ ನೀರಿಗಾಗಿ ಕೊಳದ ಕಡೆ ಅವಸರವಾಗಿ ಹೋಗುವ ದಾರಿಯಲ್ಲಿ ಬೆಟ್ಟದಂತೆ ಬಂದು ಅವರನ್ನು ಮುತ್ತಿಕೊಂಡವು.

ಅವು ಮರಗಳನ್ನು ಮುರಿಯುತ್ತ, ಮೆಳೆಗಳನ್ನು ತೀಡಿ ಮೆಟ್ಟಿದವು. ದಾಡೆಗಳಿಂದ ದಿಣ್ಣೆ ಗುಡ್ಡಗಳನ್ನು ಕಿತ್ತಿಟ್ಟವು. ಮದವೇರಿ ಸೊಂಡಿಲನ್ನು ತೂಗುತ್ತ ಬರುತ್ತಿರುವ ಆ ಆನೆಗಳನ್ನು ಕಂಡು ಬಣಜಿಗರಲ್ಲಿ ಕೆಲವರು ಓಡಿದರು. ಕೆಲವರು ಧೈರ್ಯದಿಂದ ಎದುರಿಸಿ ಭರ್ಜಿಗಳಿಂದ ತಿವಿದು ಅವುಗಳೊಡನೆ ಹೋರಾಡಿದರು. ಮದಕರಿಗಳು ಅವರನ್ನು ತುಳಿದವು. ವೀರ ಬಣಜಿಗರು ಅವುಗಳೊಡನೆ ಹೋರಾಡಿದರು. ಆದರೆ ಆನೆಗಳನ್ನು ಎದುರಿಸಿ ನಿಲ್ಲಲ್ಲು ಸಾಧ್ಯವೇ? ಅವರು ಹಿಂದೆಗೆದು ದಿಕ್ಕು ದಿಕ್ಕಿಗೆ ಓಡಿದರು.

## ದೈವವ ನೆನೆದ ಭಕ್ತರಿಗುಂಟೆ ಭಯ

ಧೈರ್ಯವಾಗಿ ಹಿಂತಿರುಗಿ ಬರುತ್ತಿದ್ದ ಬಣಜಿಗರನ್ನು ನೋಡಿದ ಅವರ ಯಜಮಾನ ಇದನ್ನು ಬಗೆಹರಿಸುವುದು ಹೇಗೆ ಎಂದು ಚಿಂತಿಸಿದ : ಆ ವೈಶ್ಯ ಕುಲತಿಲಕನು ದಮಯಂತಿಗಾಗಿ ಮರುಗುತ್ತ ಹೇಳಿದ,

'ಅಮ್ಮಾ, ಮದಗಜಗಳು ನಮ್ಮನ್ನು ಕೊಲ್ಲುತ್ತಿವೆ. ಇದರಿಂದ ಪಾರಾಗುವ ಬಗೆ ಗೊತ್ತಿಲ್ಲ. ನೀವು ನಮ್ಮನ್ನು ನಂಬಿ ಬಂದಿರಿ. ನಿಮ್ಮನ್ನು ವಿಧಿ ಇಲ್ಲಿಗೆ ತಂದಿತು. ಈ ಲೋಕದಲ್ಲಿ ವಿಧಿ ಲಿಖಿತವನ್ನು ಮೀರುವವರಾರು?'

'ವೈಶ್ಯ ಪ್ರಮುಖರೇ, ನಾನು ಹುಟ್ಟಿದ್ದು ಭೀಮರಾಜನ ಮನೆಯಲ್ಲಿ. ನಳ ಚಕ್ರವರ್ತಿ ನನ್ನ ಪತಿ. ವೀರಸೇನ ನನ್ನ ಮಾವ. ಹೀಗಿದ್ದರೂ ನಾನು ಕಾಡಿನಲ್ಲಿ ಕಾಡಾನೆಗಳಿಗೆ ಈ ಶರೀರವನ್ನು ಬಲಿಯಾಗಿಸಬೇಕೆಂದು ವಿಧಿಯಾಗಿದ್ದರೆ, ನೀವೇನು ಮಾಡಲು ಸಾಧ್ಯ?' ಎಂದು ಮಂದಗಮನೆ ದಮಯಂತಿ ಹೇಳುತ್ತ ಕಣ್ಣು ಮುಚ್ಚಿ ಮನಸ್ಸಿನಲ್ಲಿ ಶ್ರೀಹರಿಯ ಪಾದವನ್ನು ನೆನೆಯುತ್ತ 'ವನಜನಾಭ ಮುಕುಂದ ಸಲಹು' ಎಂದು ಪ್ರಾರ್ಥಿಸಿದಳು. ಆಗ ಆ ಆನೆಗಳು ಕಾಡಿಗೆ ಮರಳಿದವು. ದಮಯಂತಿ ವ್ಯಾಪಾರಿಗಳನ್ನು ಸಂತೈಸಿದಳು.

'ದೇವರನ್ನು ನೆನೆವ ಭಕ್ತರಿಗೆ ಭಯವಿಲ್ಲ' ಎಂದು ಧರ್ಮರಾಯನಿಗೆ ರೋಮಶ ಮುನಿಗಳು ಹೇಳಿದರು.

# ಸೈರಂಧ್ರಿ ದಮಯಂತಿ

ಆತಂಕದ ರಾತ್ರಿ ಕಳೆದು ಬೆಳಗಾಯಿತು. ವ್ಯಾಪಾರಿಗಳು ದಮಯಂತಿಯೊಂದಿಗೆ ನಡೆಯುತ್ತ ಚೇದಿ ಪಟ್ಟಣವನ್ನು ತಲುಪಿದರು. ಹೊಳೆಯುವ ಹೊನ್ನಿನಿಂದ ಕೂಡಿದ ಸೌಧಗಳನ್ನು, ತಳತಳ ಪ್ರಕಾಶಿಸುವ ಮಹಡಿಮನೆಗಳನ್ನು ನೋಡುತ್ತ ಹರ್ಷಗೊಂಡು ಪಟ್ಟಣವನ್ನು ಪ್ರವೇಶಿಸಿದರು.

ರಸಲೇಪದ ಹೊನ್ನೋ, ಮಲಿನ ವಸ್ತ್ರದಲ್ಲಿ ಅಡಗಿದ ರತ್ನವೋ, ಸೊರಗಿದ ಮೋಡದಲ್ಲಿ ಶೋಭಿಸುವ ಚಂದ್ರನೋ ಎಂಬಂತಿರುವ ದಮಯಂತಿ ಆ ಪುರದಲ್ಲಿ ನಡೆದು ಬರುತ್ತಿರಲು – ಪಟ್ಟಣಿಗರು ಅಲ್ಲಲ್ಲಿ ನಿಂತು ನೋಡುತ್ತ ಸಂತೋಷಪಟ್ಟರು. 'ಯಾರಿವಳು' ಎಂದು ಅಚ್ಚರಿಗೊಂಡರು.

ಆ ಪಟ್ಟಣದ ಬೀದಿಯಲ್ಲಿ ಅವಳು ಸಡಗರದಿಂದ ಬರುತ್ತಿರಲು ಅವಳ ಇಂಪಾದ ನುಡಿಗೆ ಗಿಳಿ ಕೋಗಿಲೆಗಳು ನಲಿದವು! ಅವಳ ದುಂಡಾದ ಸ್ತನಭಾರಕ್ಕೆ ನಡು ಬಳುಕುತ್ತಿತ್ತು! ತಲೆಗೂದಲ ಭಾರಕ್ಕೆ ಕುತ್ತಿಗೆ ಬಾಗುತ್ತಿತ್ತು! ಬೊಗಸೆಗಣ್ಣುಗಳ ನೋಟವು ಕಾರ್ಮುಗಿಲೊಡೆದು ಮಿಂಚುವ ಮಿಂಚಿನಂತಿತ್ತು!

ಸ್ವರ್ಣಮಯವಾದ ಉಪ್ಪರಿಗೆಯಲ್ಲಿ ಸ್ತ್ರೀಯರ ಓಲಗದಲ್ಲಿದ್ದ ಚೇದಿರಾಜನ ಪತ್ನಿ ತಾವರೆಗಂಗಳ ದಮಯಂತಿಯನ್ನು ನೋಡಿದಳು. 'ಈ ಮಹಾಸತಿ ಯಾರು? ದೇವೇಂದ್ರನ ಪತ್ನಿಯೆ?' ಎಂದು ಕುತೂಹಲದಿಂದ ಬರ ಹೇಳಿದಳು. ಆ ಕರೆಯಂತೆ ದಮಯಂತಿ ಬಂದು ನಿಲ್ಲಲು ಆ ರಾಣಿಯು ಅವಳನ್ನು ಪ್ರಶ್ನಿಸಿದಳು.

'ತಾಯಿ, ನೀನು ಯಾರು? ಯಾವ ರಾಜನ ಹೆಂಡತಿ? ನೀನು ಈ ತುಂಬು ಪ್ರಾಯದಲ್ಲಿ ಕಳೆಗುಂದಿ ಮಸುಕಾಗಿರುವುದೇಕೆ?'

ಆ ನುಡಿ ಕೇಳಿ ನಳನೃಪನ ರಾಣಿಯ ಕಣ್ಣಿನಲ್ಲಿ ನೀರು ತುಂಬಿತು. ಅತಿ ದುಃಖದಿಂದ ತನ್ನ ವೃತ್ತಾಂತವನ್ನು ಹೇಳುತ್ತ ಹೀಗೆ ಪ್ರಾರ್ಥಿಸಿದಳು :

'ಅಮ್ಮ, ನನ್ನ ಪತಿ ಜೂಜಿನಲ್ಲಿ ರಾಜ್ಯವನ್ನು ಸೋತನು. ಕಾಡಿಗೆ ಬಂದು ನನ್ನನ್ನು ತೊರೆದು ಹೋದನು. ಬುದ್ಧಿಗೆಟ್ಟಂತಾಗಿ ತಿರುಗಾಡುತ್ತ ನಿಮ್ಮ ಪಾದದ ಬಳಿಗೆ ಬಂದಿದ್ದೇನೆ. ನೀವೇ ನನಗೆ ಗತಿ. ನಾನು ಪರದೇಶಿ. ಪರಹಿತವೇ ಪುಣ್ಯವಲ್ಲವೇ? ನೀವು ನನ್ನನ್ನು ರಕ್ಷಿಸಿ.'

ಅದನ್ನು ಕೇಳಿದ ರಾಣಿಯು ಘಲಿರು ಘಲಿರೆನುವ ನೂಪುರದ ಅಡಿಯಿಡುತ್ತ ಬಂದು ದಮಯಂತಿಯನ್ನು ಬಿಗಿದಪ್ಪಿಕೊಂಡಳು. ಕಂಬನಿ ಒರಸಿ, 'ತರುಣಿಯೇ, ವ್ಯಥೆಯನ್ನು ಬಿಡು. ರೇಷ್ಮೆ ಸೀರೆಯನ್ನುಡು. ಹೂ ಸರವನ್ನು ಮುಡಿ' ಎಂದು ಹೇಳಿ ಉಪಚರಿಸಿದಳು. ಮನಸ್ಸು ತುಂಬಿ ಬಂದ ದಮಯಂತಿಯು ನುಡಿದಳು,

'ದೇವಿ, ನೀವು ತೋರಿದ ಪ್ರೀತಿಯೇ ಒಂದು ಗೌರವ. ನನಗಿನ್ನಾವ ಭೂಷಣವೂ ಬೇಡ. ಪರದೇಶಿಯಾದ ನಾನು ತಮ್ಮ ಚರಣ ಸೇವೆಯಲ್ಲಿರುತ್ತೇನೆ. ನಾನು ಹೀನ ಕೆಲಸ ಮಾಡುವವಳಲ್ಲ. ನನ್ನನ್ನು ರಕ್ಷಿಸುವ ರೀತಿ ನೀವೇ ತಿಳಿದಿರುವಿರಿ'.

'ನಮ್ಮಿಂದ ನಿನಗೆ ಯಾವ ತೊಂದರೆಯೂ ಆಗುವುದಿಲ್ಲ. ಹೀನ ಕೆಲಸವನ್ನು ನಾವು ಹೇಳುವುದಿಲ್ಲ. ಅದರ ಚಿಂತೆ ಮಾಡಬೇಡ. ನನಗೆ ಸುನೀತಿ ಎಂಬ ಮಗಳಿದ್ದಾಳೆ. ಅವಳಲ್ಲಿ ಸೈರಂಧ್ರಿ (ಅರಮನೆಯ ಅಂತಃಪುರದ ದಾಸಿ)ಯಾಗಿ ಸದಾಕಾಲ ಇರಬಹುದು'

ಎಂದು ರಾಣಿಯು ನಸುನಗುತ್ತ ಹೇಳಿ – ನೇಮಿಸಿ, ಮಗಳ ಮನೆಗೆ ಕಳುಹಿಸಿದಳು.

ಚೇದಿರಾಜನ ಪತ್ನಿಗೆ ದಮಯಂತಿಯು ತನ್ನ ಸಹೋದರಿಯ ಮಗಳೆಂದು ತಿಳಿದಿರಲಿಲ್ಲ. ಯಾರ ಮಡದಿಯೆಂಬುದು ಗೊತ್ತಿರಲಿಲ್ಲ. ಆದರೂ ಅವಳನ್ನು ಭೇದ ಭಾವವಿಲ್ಲದೆ ಮಗಳಂತೆ ಕಂಡಳು. ಕರುಣೆಯಿಂದ ನೋಡಿಕೊಂಡಳು.

ದಮಯಂತಿಯು ಸುನೀತಿಯ ಮನೆಯಲ್ಲಿ ಯಾವುದೇ ಭೇದವಿಲ್ಲದೆ ದಿನ ಕಳೆದಳು. ಅವಳ ಮನಸ್ಸಿನ ದುಗುಡ ಕಡಿಮೆಯಾಯಿತು. ಪ್ರತಿದಿನ ಆಹಾರ ನಿದ್ರೆ ತೊರೆದು 'ಶ್ರೀಹರಿಯ ಕೃಪೆಯಿಂದ ತನ್ನ ಪತಿ ಯಾವಾಗ ಬಂದು ಮುಖ ತೋರಿಸುವನೋ' ಎಂದು ಚಿಂತಿಸುತ್ತಿದ್ದಳು.

# ಕಾಲವಾವನ ಕೀಳು ಮಾಡದು

**ಕು**ಂತೀತನಯನೇ ಕೇಳು. ನಳಮಹಾರಾಜನು ದಮಯಂತಿಯು ಗಾಢನಿದ್ರೆಯಲ್ಲಿದ್ದಾಗ ಬಿಟ್ಟುಹೋದನು. ಕಾಲವು ಯಾರನ್ನು ತಾನೆ ಕೀಳಾಗುವಂತೆ ಮಾಡದು? ಅದನ್ನು ಶೂಲಪಾಣಿ ಶಿವನೇ ಬಲ್ಲನು.

ನಳನ ವಿಧಿಯನ್ನು ಏನೆಂದು ಹೇಳಲಿ? ಒಂಟಿಯಾಗಿ ಕಾಡಿನಲ್ಲಿ ಅಲೆಯುವಾಗ ಅವನಿಗೆ ದಮಯಂತಿಯದೇ ಚಿಂತೆಯಾಯಿತು. ವನಿತೆ ಮಲಗಿದ್ದಾಳೆಯೋ? ಧೈರ್ಯಗೆಟ್ಟು ದೇವರನ್ನು ನೆನೆಯುತ್ತಿದ್ದಾಳೆಯೋ? ನಿದ್ರೆಯಲ್ಲಿ ಕನಸು ಕಂಡು ಏಳುವಳೋ? ನನ್ನನ್ನು ಕಾಣದೆ ಹಂಬಲಿಸುತ್ತ ವಿಧಿಯನ್ನು ಬೈಯ್ಯುವಳೋ? ಅತಿ ದುಃಖದಿಂದ ತನ್ನ ಪ್ರಾಣವನ್ನೇ ಕಳೆದುಕೊಳ್ಳುವಳೋ? ಎಂದು ಹಲವು ವಿಧದಲ್ಲಿ ಅವಳ ಬಗ್ಗೆ ವ್ಯಥೆಪಡುತ್ತಿದ್ದನು.

'ಮಕ್ಕಳನ್ನು ಬೇರೆಯವರಲ್ಲಿ ಬಿಟ್ಟು, ನಂಬಿದ ಸತಿಯನ್ನು ಅಡವಿಯಲ್ಲಿ ಮಲಗಿಸಿ ನನಗೆ ಬುದ್ಧಿ ಭ್ರಮಣೆಯಾದಂತಾಗಿದೆ. ಇದು ಯಾವ ಪುರಾತನ ಕರ್ಮಫಲವೋ ಏನೋ ತಿಳಿಯದು. ಈ ಭೂಲೋಕದಲ್ಲಿ ಧರ್ಮಪತ್ನಿಗೆ ಮೋಸಗೈದ ಕ್ರೂರ, ನಿರ್ದಯಿ ನಾನಲ್ಲವೇ? ಶಿವ ಶಿವ!!' ಎಂದು ತನ್ನನ್ನೇ ಪ್ರಶ್ನಿಸಿಕೊಳ್ಳುತ್ತ, ಶೋಧಿಸಿಕೊಳ್ಳುತ್ತ ಸಾಗಿದನು.

'ದಮಯಂತಿಯು ಲೋಕದಲ್ಲಿ ಶ್ರೇಷ್ಠ ರಾಜರುಗಳನ್ನು ಒಲ್ಲದೆ ಬಿಟ್ಟು, ನನ್ನನ್ನೇ ಮೆಚ್ಚಿ ವಿವಾಹವಾದಳು. ಅಂತಹವಳನ್ನು ಅಗಲಿದ ಪಾತಕನು ನಾನು. ನನ್ನಂತಹವನು ಈ ಭೂಮಿಯಲ್ಲಿರಬಾರದು. ಶಿವ ಶಿವ!!' ಎಂದು ತನ್ನ ಮನದನ್ನೆ ದಮಯಂತಿಯನ್ನು ನೆನೆನೆನೆದು ಮರುಗಿದನು. ಹೀಗೆ ಅತಿಶೋಕದಿಂದ ಪ್ರಲಾಪಿಸುತ್ತ ವೇದನೆಗೊಳಗಾಗಿ ಕಡುನೊಂದು ಬಳಲಿದನು. ಯಾತನೆಗೊಳಗಾಗಿ ಮನಸ್ಸಿನಲ್ಲಿ ಶ್ರೀಹರಿಯನ್ನು ಧ್ಯಾನಿಸುತ್ತ,

ಹೃದಯ ತಾಪದಲ್ಲಿ ಭಗಭಗ ಉರಿದು ಬರುತ್ತಿದ್ದನು. ಆಗ ಮುಂದೆ ಸಮೀಪದಲ್ಲಿ ಧಗಧಗಿಸಿ ಎಲ್ಲವನ್ನು ಸುಡುತ್ತಿರುವ ಅಗ್ನಿಯನ್ನು ಕಂಡನು.

## ಪಕ್ಷಿ ಸಂಕುಲ ಉದುರಿದುವು ಗರಿಸಹಿತ ಬೆಂದಾವನದ ಮಧ್ಯದಲಿ

ರಾಜ ಧರ್ಮರಾಯನೇ ಆ ಕಿಚ್ಚಿನ ಹಾನಿಯನ್ನು ಏನೆಂದು ಹೇಳಲಿ? ಬೆಂಕಿಯು ಕೆನ್ನಾಲಗೆಯನ್ನು ಚಾಚಿ ಸೂರ್ಯ ಮಂಡಲಕ್ಕೆ ಹಬ್ಬಿತು. ಹೊಗೆ ಮುಸುಕಿ ಕಾಡನ್ನೆಲ್ಲ ದಳ್ಳುರಿ ಆವರಿಸಿತು. ಅದರಲ್ಲಿ ಮರ ಗಿಡಗಳು ಭಸ್ಮವಾದವು. ದೇವತೆಗಳು ನಡುಗಿ ಹೋದರು. ಭೂಮಿಯೆಲ್ಲ ಭಸ್ಮವಾಯಿತು. ಬಿದಿರ ಮೆಳೆಗಳು ಧಗಧಗಿಸಿದರೆ ಹೆಬ್ಬಿದಿರು ಛಟಛಟಾರೆಂದು ಬೆಂದು ಹೋದವು. ಆ ಝುಳದಲ್ಲಿ ಬಾಳೆಗಳು ಸಿಮಿಸಿಮಿ ಎಂದು ಸುಡುವ ಶಬ್ದ ಮಾಡುತ್ತ ಉರಿದುಹೋದವು. ಗುಹೆಗಳಲ್ಲಿದ್ದ ಹುಲಿ ಸಿಂಹ ಹಾಗೂ ಇತರ ಪ್ರಾಣಿಗಳು ಬೆದರಿ ಓಡಿ ಹೋದವು. ಆ ವನದ ಮಧ್ಯದಲ್ಲಿ ಗಂಡಭೇರುಂಡ ಮುಂತಾದ ಪಕ್ಷಿ ಸಂಕುಲವು ಗರಿಸಹಿತ ಬೆಂದು ಉದುರಿಹೋದವು. ನಿಮಿಷ ಮಾತ್ರದಲ್ಲಿ ನಾನಾ ಮೃಗಗಳು ಮತ್ತು ಆನೆಗಳ ಹಿಂಡು ಬೆಂದುಹೋದವು. ಅಖಿಲ ಮೃಗ ಪಕ್ಷಿಗಳು ಆ ಕಿಚ್ಚಿನಲ್ಲಿ ದಹಿಸಿ ಹೋದವು. ಪ್ರಳಯ ಕಾಲದ ಬಡಬಾಗ್ನಿ (ಸಮುದ್ರದಲ್ಲಿರುವ ಬೆಂಕಿ)ಯಂತೆ ಕಾಡ್ಗಿಚ್ಚು ಸುಳಿ ಸುಳಿಯುತ ಎಲ್ಲವನ್ನೂ ನುಂಗಿ ಹಾಕುತ್ತಿರಲು – ನಳನೃಪನಿಗೆ ಒಂದು ದನಿ ಕೇಳಿಸಿತು.

## ನೃಪತಿಯ ಪರಮತೇಜದ ದೇಹ ಕೆಟ್ಟಿತು ವಿಕೃತರೂಪಾಗಿ

'ನೃಪಕುಲ ಶಿರೋಮಣಿಯೇ, ಬೆಂಕಿಯಲ್ಲಿ ಸಿಲುಕಿಕೊಂಡಿದ್ದೇನೆ. ನೀನು ಕೃಪೆ ತೋರಿ ನನ್ನನ್ನು ಬಿಡಿಸು. ನಿನಗೆ ಪುಣ್ಯ ಲಭಿಸುವುದು.'

ಆ ದನಿ ಕೇಳಿ ನೃಪತಿಯು ನಿರಾತಂಕ ಮನದಿಂದ ಕೂಗಿದವರಾರೆಂದು ನುಗ್ಗಿ ಬರುತ್ತಿರಲು ಒಂದು ಸರ್ಪರಾಜನನ್ನು ಕಂಡನು. ಅದು ದೀನವಾಗಿ ನೋಡುತ್ತ ಹೇಳಿತು:

'ನನ್ನ ಪ್ರಾಣ ಹೋಗುತ್ತಿದೆ. ಸಕಲ ಶಾಸ್ತ್ರವನ್ನು ಬಲ್ಲ ಮಹಾರಾಜನೆ ನನ್ನನ್ನು ಕಾಪಾಡು, ಕಾಪಾಡು.'

'ನೀನಾರು?'

'ರಾಜನೇ ಕೇಳು. ನಾನು ಸರ್ಪರಾಜ ಕಾರ್ಕೋಟಕ. ನಾನು ಈ ಕಾಡಿನಲ್ಲಿರಲು ಒಂದು ದಿನ ಓರ್ವ ಋಷಿಮುನಿ ಅಕಸ್ಮಾತ್ತಾಗಿ ನನ್ನನ್ನು ಮುಟ್ಟಿದನು. ನಾನೆಲ್ಲಿ ಕಡಿದು ಬಿಡುವೆನೊ ಎಂದು ಭೀತಿಯಲ್ಲಿ, ಅತ್ತಿತ್ತ ಸಂಚರಿಸದಿರುವಂತೆ ಶಾಪ ಕೊಟ್ಟನು.

‘ಉರಗರಾಜ ಉಃಶಾಪ (ಶಾಪವನ್ನು ನಿವಾರಿಸುವ ವರ) ಕೇಳಲಿಲ್ಲವೇ?’

‘ಕಾಲಾಂತರದಲ್ಲಿ ನಳನೃಪನು ಇಲ್ಲಿಗೆ ಬರುವನು. ಅವನ ಕೈ ಸೋಕಿನಿಂದ ಈ ಶಾಪ ಪರಿಹಾರವೆಂದನು.’

‘ಓಹ್, ನಿನಗೂ ನನಗೂ ನಂಟು ಇದೆ!’

‘ಹೌದು ಮಹಾರಾಜ. ಮುನಿ ವಚನದಂತೆ ನಿನ್ನನ್ನೇ ನಿರೀಕ್ಷಿಸುತ್ತಿದ್ದೆ. ನೀನು ಬಂದಿರುವೆ. ದಯೆ ತೋರು. ಅಗ್ನಿಯಿಂದ ಬದುಕಿಸು.’

ಕರುಣಾಳು ನಳನು ಭೀತಿಗೊಳ್ಳದೆ ಆ ಉರಗಪತಿಯನ್ನು ಎರಡು ಕೈಗಳಿಂದ ಎತ್ತಿಕೊಂಡು ಬಂದು, ಬೆಂಕಿಯ ಉರಿಯಿಂದ ಪಾರು ಮಾಡಿದನು, ಒಂದು ಕೊಳದ ಬಳಿಗೆ ತಂದು ಉಪಚಾರ ಮಾಡಿದನು.

ಆಗ ಕಾರ್ಕೋಟಕ ಸರ್ಪವು ನಳನ ಕೈಯನ್ನು ಕಚ್ಚಿತು. ತಕ್ಷಣ ಅದರ ವಿಷವೇರುತ್ತಿದ್ದಂತೆ ನೃಪತಿಯ ಪರಮ ತೇಜದ ದೇಹ ಕೆಟ್ಟಿತು, ವಿಕಾರ ರೂಪಾಯಿತು.

ನಳಮಹಾರಾಜನಿಗೆ ಆ ವಿಷದಿಂದ ದೊಡ್ಡ ಹೊಟ್ಟೆ ಗೂನು ಬೆನ್ನು ಅಡ್ಡ ಮೋರೆಯಾಯಿತು. ಗಂಟು ಮೂಗು, ದೊಡ್ಡ ಕೈಕಾಲುಗಳಾದವು. ಮೈ ಮೀಸೆಯ ಕೂದಲುಗಳು ಉದುರಿ ಹೋದವು. ದೇಹ ಜಡ್ಡಾಯಿತು. ಕತ್ತು ಮೋಟಾಯಿತು. ಗಿಡ್ಡ ಆಕೃತಿಯಲ್ಲಿ ಹರಕು ಗಡ್ಡದ ಹೆಡ್ಡನಂತಹ ಕುರೂಪ ಆವರಿಸಿತು.

## ಮಾರನಾಕಾರದ ನೃಪಾಲಕ ಕ್ರೂರ ರೂಪಾದನು

ಮನ್ಮಥರೂಪಿನ ನಳನೃಪನು ಕುರೂಪಿಯಾದ. ತನ್ನನ್ನೇ ನೋಡಿಕೊಳ್ಳುತ್ತ ವಿಷಾದಗೊಂಡು ಮನಸ್ಸಿನಲ್ಲಿ ‘ಪೂರ್ವಜನ್ಮದಲ್ಲಿ ಮಾಡಿದ ಕರ್ಮಫಲವನ್ನು ಮೀರಲು ಸಾಧ್ಯವೇ? ಶ್ರೇಷ್ಠ ಮಾಣಿಕ್ಯವೆಂದು ಹಿಡಿದರೆ ಅತಿ ಸುಡುವ ಕೆಂಡವಿದಾಯ್ತು! ಶಿವ ಶಿವ!! ಕ್ರೂರ ಜಂತುಗಳ ಗೆಳೆತನದ ಫಲ ನನಗೆ ದೊರಕಿತು!’ ಎಂದುಕೊಂಡ. ಪ್ರಕಟವಾಗಿ ಕಾರ್ಕೋಟಕನೊಂದಿಗೆ ಹೀಗೆ ಹೇಳಿದ :

‘ಉರಗಪತಿಯೇ, ಹಣೆ ಬರಹ ಬೆನ್ನು ಬಿಡದಿದೆ. ನೊಂದರೆ ಏನು ಪ್ರಯೋಜನ? ನಾನೇ ಪಾಪಿಷ್ಠ. ಶ್ರೀಹರಿಯ ಕೃಪೆ ತಪ್ಪಿದ ಬಳಿಕ ಲೋಕದಲ್ಲಿ ಇನ್ನಾರು ರಕ್ಷಿಸುವರು?’

‘ನೃಪತಿಯೇ, ಏಕೆ ವ್ಯಥೆ ಪಡುವೆ? ನಾನು ನೀಡಿದ್ದು ವ್ಯರ್ಥವಾದ ಉಣಿಸಲ್ಲ! ಈ ಲೋಕವು ನಿನ್ನನ್ನು ಕಾಣದಂತಿರಬೇಕೆಂದು ನಿನ್ನನ್ನು ಕಡಿದು ವಿಷವನ್ನು ಏರಿಸಿದೆ. ನೀನು ವಿವೇಕಿ, ಅಂಜದಿರು. ನಿನಗೆ ಇದರಿಂದ ಅನೇಕ ಉಪಕಾರವಾಗುವುದು.’

‘ಕಾರ್ಕೋಟಕನೇ, ನನಗೊಂದೂ ಅರ್ಥವಾಗುತ್ತಿಲ್ಲ.’

‘ನೃಪನೇ, ಶಾಂತಚಿತ್ತನಾಗಿ ಆಲಿಸು. ಈ ವಿಷ ನಿನ್ನ ಸರ್ವಾಂಗದಲ್ಲಿ ಹರಿಯುತ್ತಿರುವ ತನಕ ವೈರಿಗಳ ಬಾಣ, ನೀರು, ಬೆಂಕಿ, ಹಾವು ಮುಂತಾದವುಗಳಿಂದ ವಿಪತ್ತು ಸಂಭವಿಸುವುದಿಲ್ಲ. ಇದು ನಿಜ. ಇದು ನಿನಗೆ ವಜ್ರ ಕವಚ. ಚಿಂತೆಯನ್ನು ಬಿಡು, ಮುಂದಿನ ಕೆಲಸಗಳಿಗೆ ಸಹಾಯಕವೆಂದು ತಿಳಿ. ಭಯ ಪಡದಿರು.’

‘ಈ ಕುರೂಪ ಹೊತ್ತು ಎತ್ತ ಸಾಗುವುದು?’

‘ರಾಜನೇ ಕೇಳು, ಅಯೋಧ್ಯೆಯಲ್ಲಿ ಮಹಾರಾಜೇಂದ್ರ ಋತುಪರ್ಣನಿದ್ದಾನೆ. ಅವನು ಗುಣನಿಧಿ. ಸೂರ್ಯಕುಲ ಸಮುದ್ರಕ್ಕೆ ಚಂದ್ರನಂತೆ ಶೋಭಿಸುತ್ತಿದ್ದಾನೆ. ನೀನು ಆತನಿಂದ ಅಕ್ಷವಿದ್ಯೆ ಕಲಿತುಕೊ. ನಿನಗೆ ತಿಳಿದಿರುವ ಅಶ್ವ ವಿದ್ಯೆಯನ್ನು ಅವನಿಗೆ ಕಲಿಸಿಕೊಡು. ಚಿಂತಿಸಬೇಡ, ಹೋಗು.’

‘ನಿನ್ನ ಮಾರ್ಗದರ್ಶನದಂತೆ ನಡೆಯುತ್ತೇನೆ. ಆದರೆ, ನನ್ನ ಮೊದಲ ರೂಪು?’

‘ನೀನು ಋತುಪರ್ಣನಲ್ಲಿಗೆ ಹೋಗಿ ಸವಿ ಮಾತುಗಳಿಂದ ಅವನ ಮನವೊಲಿಸು. ಬಾಹುಕನೆಂಬ ಹೆಸರಿನಿಂದ ಪರಿಚಯಿಸಿಕೊ. ಅಶ್ವದ ಲಗಾಮು ಹಿಡಿದು ರಥ ನಡೆಸು. ಈ ವೃತ್ತಿ ಕೀಳೆಂದು ತಿಳಿಯಬೇಡ. ಮೊದಲಿನ ಸುಂದರ ರೂಪು ಬೇಕೆಂದಾಗ ನೀನು ಆ ಜಗನ್ಮೋಹನದ ಪಕ್ಷಿಗಳನ್ನು ಸ್ಮರಿಸು. ಅವು ನಿನ್ನ ಹಚ್ಚಡವನ್ನು ತಂದುಕೊಡುವವು. ಅದನ್ನು ಧರಿಸಿದ ತಕ್ಷಣ ಈ ಕುರೂಪತನ ಇಲ್ಲವಾಗುವುದು.’

‘ಸರ್ಪರಾಜನೇ, ಈಗ ನನ್ನ ಸ್ವಂತಿಕೆ ಕಳೆದುಕೊಂಡು ಪರದಾಡುವಂತಾಯಿತಲ್ಲ?’

‘ನಳ ಮಹಾರಾಜ, ನಿನ್ನ ಈ ಅವಸ್ಥೆಗಾಗಿ ಮನನೋಯದಿರು. ಹಿಂದೆ ಪಶುಪತಿ ಭಿಕ್ಷಾನ್ನವನ್ನು ಬೇಡಿದ್ದಾನೆ. ಶ್ರೀಕೃಷ್ಣನು ಕಾಡಿನಲ್ಲಿ ದನಗಳನ್ನು ಕಾಯ್ದಿದ್ದಾನೆ. ಉನ್ನತ ಐಶ್ವರ್ಯ ಹೊಂದಿದ ದೇವೇಂದ್ರನು ಅರಣ್ಯದಲ್ಲಿ ಅಲೆದಾಡಿದ್ದಾನೆ. ನನ್ನ ಮಾತನ್ನು ಗಮನವಿಟ್ಟು ಕೇಳು.’

‘ಹೇಳು ಸರ್ಪರಾಜ, ನೀನೇ ನನ್ನ ಉದ್ಧಾರಕನಾಗಿರುವೆ.’

‘ನೃಪನೇ, ಅತಿಶಯವಾದ ಸತ್ಯವ್ರತನಾಗಿರುವ ನೀನು ಜೂಜಿನಲ್ಲಿ ಪುಷ್ಕರನನ್ನು ಗೆಲ್ಲುವೆ. ಸಿರಿಸಂಪತ್ತಿನ ಸಾಮ್ರಾಜ್ಯವನ್ನು ಪತ್ನಿ ಸಹಿತ ಆಳುವೆ. ಇದು ನಾನು ನಿನಗೆ ನೀಡಿರುವ ವರ’ ಎಂದು ಹೇಳಿ ಕಾರ್ಕೋಟಕನು ಅದೃಶ್ಯನಾದನು.

ನಳನೃಪನು ತನ್ನ ಮನಸ್ಸಿನ ಆತಂಕ, ದುಃಖಗಳೊಡನೆ ಚಿಂತೆ ಅಧಿಕವಾಗುತ್ತ ಕಾಡಿನಲ್ಲಿ ಬರುತ್ತಿದ್ದನು. ಆಗ ದಾರಿಯಲ್ಲಿ ಸೊಕ್ಕಿನಿಂದ ಅಲುಗಾಡದೆ ನಿಂತ ದುಷ್ಟ

ಮೃಗಗಳನ್ನು ನೋಡಿ ನಸುನಕ್ಕನು. ಹಲವು ಗಿರಿ ಗುಹೆಗಳನ್ನು, ಅಗಮ್ಯವಾದ ವನ ಪ್ರದೇಶಗಳನ್ನು ಹಾದು ಬಂದನು. ಮುಂದೆ ಗ್ರಾಮ ಪ್ರದೇಶಗಳಲ್ಲಿ ನಡೆಯುತ್ತ ಆಯಾಸ ಗೊಳ್ಳದೆ ಹಲವು ಯೋಜನ ದೂರ ಸಾಗಿ ಋತುಪರ್ಣನ ರಾಜಧಾನಿಗೆ ಬಂದನು.

## ಉರುತರದ ಪಾನೀಯ ಶಾಲೆ

ಅಯೋಧ್ಯಾ ನಗರದಲ್ಲಿ ತುಂಬಿಹರಿವ ನದಿ, ಕೆರೆಗಳನ್ನು ಹಸಿರು ವನಗಳನ್ನು ನೋಡಿ ನಳನ ಮನಸ್ಸು ತಂಪಾಯಿತು. ಮಲ್ಲಿಗೆ, ಕೊಳದ ಕೆಂದಾವರೆಯ ಕಂಪಿಂದ ಮನಸ್ಸು ಉಲ್ಲಾಸಗೊಂಡಿತು. ಉತ್ತಮ ಪಾನೀಯ ಶಾಲೆಗಳಿಂದ ದೇಹ ತಣಿಯಿತು. ಹಸಿರುಕ್ಕುವ ಸಮೃದ್ಧ ಮರಗಳಿಂದ ಮನಸ್ಸು ಸೊಂಪಾಯಿತು. ಆ ನಗರ ಎತ್ತರದ ಗೋಡೆ ಮತ್ತು ಆಳವಾದ ಕಂದಕವನ್ನು ಹೊಂದಿ ನಾಲ್ಕು ದಿಕ್ಕಿನಲ್ಲಿ ಭೇದಿಸಲು ಅಸಾಧ್ಯವಾದ ವಜ್ರ ಬಾಗಿಲುಗಳನ್ನು ಹೊಂದಿತ್ತು.

ವರ್ಣಿಸಲು ಸಾಧ್ಯವಿಲ್ಲವೆಂಬಂತೆ ಆ ನಗರದ ಸೌಧಗಳು ಹೊಳೆಯುವ ಚಿನ್ನದ ಕಲಶಗಳಿಂದ ಪ್ರಜ್ವಲಿಸುತ್ತಿದ್ದವು. ಉಪ್ಪರಿಗೆಯ ಪಡಸಾಲೆಗಳಲ್ಲಿ ಲಲನೆಯರು ವಿವಿಧ ವಿನೋದಾವಳಿಗಳಲ್ಲಿ ರಂಜಿಸುತ್ತಿದ್ದರು. ಹಲವು ಗೋಪುರಗಳ ಅಗಣಿತ ವಿವಿಧ ವಿನ್ಯಾಸದ ಕಟ್ಟಡಗಳು ಅಲ್ಲಿ ಶೋಭಿಸುತ್ತಿದ್ದವು.

ಆ ನಗರದ ರಾಜಬೀದಿಗಳಲ್ಲಿ ಎಲ್ಲ ವರ್ಣದ ಅಗಣಿತ ಪುರಜನರು ಇದ್ದು; ವಿವಿಧ ವ್ಯಾಪಾರದ ನವವಿಧ ಅಂಗಡಿಗಳಿದ್ದವು. ಅಲ್ಲಿ ಆನೆ, ಕುದುರೆ, ರಥ, ಕಾಲಾಳುಗಳ ಚತುರಂಗಬಲ ಕಾಣಿಸಿತು. ನಳನು ಅದನ್ನೆಲ್ಲ ನೋಡಿ ಮೆಚ್ಚಿ ತಲೆದೂಗುತ್ತ ಆ ನಗರವನ್ನು ಪ್ರವೇಶಿಸಿದನು. ಋತುಪರ್ಣನ ಮಹಾಸಿರಿಯನ್ನು ಕೊಂಡಾಡಿದನು. ವಿಧಿ ತನ್ನನ್ನು ಇಲ್ಲಿಗೆ ತಂದಿತಲ್ಲ! ನಾನು ದುರದೃಷ್ಟಶಾಲಿ ಎಂದು ಮನನೊಂದು ಶ್ರೀಹರಿಯನ್ನು ನೆನೆಸಿದನು.

## ಬಾಹುಕನಾದ ನಳನೃಪ

ಧರ್ಮರಾಜನೇ ಕೇಳು. ಋತುಪರ್ಣ ಮಹಾರಾಜನು ರತ್ನ ನಿರ್ಮಿತವಾದ ಅರಮನೆಯ ಓಲಗ ಶಾಲೆಯಲ್ಲಿ ಸಿಂಹಾಸನದಲ್ಲಿ ಕುಳಿತಿದ್ದನು. ಆ ಓಲಗವು ಕಿರೀಟಧಾರಿಗಳಾದ ರಾಜರು, ಬ್ರಾಹ್ಮಣರು, ಮಂತ್ರಿಗಳು, ಪುರೋಹಿತರು, ಗುಣಶೀಲರು, ಗೌರವಾರ್ಹ ಮಹಿಳೆಯರಿಂದ ಮೆರೆಯುತ್ತಿತ್ತು. ಇದೇ ಸೂಕ್ತ ಸಮಯವೆಂದು ನಳನೃಪನು ಮುದದಿಂದ ವೇಷಭೂಷಣಗಳನ್ನು ತೊಟ್ಟು ಹರಿಯಂತೆ ರಾಜಸಭೆಗೆ ಬಂದನು. ಮಹಾರಾಜ ಋತು ಪರ್ಣನಿಗೆ ಕೈ ಮುಗಿದನು. ಆಗ ಆ ಆಸ್ಥಾನದಲ್ಲಿ ಹಗೆಗಳ ಪಡೆ ಎದುರಿಸಿದ ಕದನ ಕಲಿಗಳು 'ಜೀಯ' ಎಂದು ಉದ್ಘೋಷಿಸಿದರು. ಆ ಸಮಯದಲ್ಲಿ ನಳನು ನಯವಿನಯದಿಂದ ಆ ರಾಜನಿಗೆ ಹೀಗೆ ವಿನಂತಿ ಮಾಡಿಕೊಂಡನು :

### ಮುಂಗೈಗಂಕಣಕೆ ಕುಲದೀಪ ಕನ್ನಡಿಯೇಕೆ

'ಅವನಿಪತಿಯೇ ಕೇಳು. ನಿಮ್ಮ ಪಾದ ಕಮಲಗಳ ಸೇವೆಗೆ ಬಂದಿದ್ದೇನೆ. ನನಗೆ ಸುಳ್ಳು ಗೊತ್ತಿಲ್ಲ. ನನ್ನ ಹೆಸರು ಬಾಹುಕ. ನಾನು ಅಶ್ವ ಕುಲ ಹೃದಯವಿದ್ಯೆಯನ್ನು ತಿಳಿದವನು, ಪಾಕ ವಿದ್ಯಾ ಪರಿಣತನು, ನಾನು ಸುಂದರನಲ್ಲವಾದರೂ ಹೀನಮನುಷ್ಯನಲ್ಲ. ನೀವು ನನ್ನ ಪೌರುಷವನ್ನು ಪರೀಕ್ಷಿಸಿ ನೋಡಿ. ಭೂಪನೇ ಮುಂಗೈ ಕಂಕಣಕ್ಕೆ ಬೆಳಗುವ ದೀಪ ಕನ್ನಡಿಯೇಕೆ? ಕಷ್ಟ ಕೊಡುವ ಬಲಿಷ್ಠ ಕುದುರೆಯನ್ನು ತರಿಸು, ಪರೀಕ್ಷಿಸು.'

### ರಾವುತರರಸನಹುದೋ ಭಾಪು ಭಾಪೆಂದುದು ಸಮಸ್ತಜನ

ಋತುಪರ್ಣನು ಬಾಹುಕನ ನುಡಿಗೆ ಮೆಚ್ಚಿದನು. ತನ್ನ ಮನಸ್ಸಿಗೆ ಶ್ರೇಷ್ಠವೆನಿಸಿದ ಕುದುರೆಯನ್ನು ತರಿಸಿದನು. ಅದನ್ನು ಏರಿದ ನಳನ ಕಾಲಿನ ಹಿಮ್ಮಡಿಯ ಸನ್ನೆಗೆ ಆ

ಕುದುರೆ ಕುಣಿಯಿತು. ಮುಂದಿನ ಕಾಲುಗಳನ್ನು ಜೋಡಿಸಿ ನೆಲ ಒದೆದು ಚಿಮ್ಮಿ ನೆಗೆಯಿತು. ವಾಯು ವೇಗದಲ್ಲಿ ಓಡಿತು. ಕೈಯ ಕಡಿವಾಣವನ್ನು ಸಡಿಲ ಬಿಡಲು ಹುರುಪು ಉತ್ಸಾಹದಿಂದ ಗಮನವನ್ನು ಮುಂದಕ್ಕೆ ಹರಿಸಿ ಸಂಭ್ರಮದಿಂದ ಕೆಂಧೂಳಿ ಎಬ್ಬಿಸಿತು. ಆ ಧೂಳು ಆಕಾಶವನ್ನು ಆವರಿಸಿತು. ಧರಣಿ ತಲ್ಲಣಗೊಂಡಿತು. ಗಗನದಲ್ಲಿ ದೇವತೆಗಳು ಕೊಂಡಾಡಿದರು.

'ಈತ ರಾವುತರ ಅರಸ. ಭಲಾ! ಭಲಾ! ಬಾಪ್ಪುರೇ!' ಎಂದು ಅಲ್ಲಿ ನೆರೆದಿದ್ದ ಸಮಸ್ತಜನ ಸಂತೋಷದಿಂದ ಕೂಗಿ ಮೆಚ್ಚುಗೆ ವ್ಯಕ್ತಪಡಿಸಿದರು.

ನಳನು ಹಿಂದಿರುಗಿ ಬರುವುದಕ್ಕಾಗಿ ಕುದುರೆಯನ್ನು ಹಿಮ್ಮಡಿಯಿಂದ ಸಂಜ್ಞೆ ಮಾಡಿ ಹೊರಳಿಸಲು ಅದು ಅತಿ ವೇಗದಲ್ಲಿ ತಿರುಗಿತು. ಅದು ಜೋರಾಗಿ ಓಡಿ ಬರುತ್ತ ಆಯಾಸಗೊಂಡು ಪಕ್ಕಕ್ಕೆ ಸಾಗುತ್ತ ಕಿರು ಬೆವರು ಸೂಸುವುದನ್ನು ಕಂಡು ನಿಲ್ಲಿಸಿದನು. ಅದರಿಂದಿಳಿದು ಋತುಪರ್ಣ ರಾಜನಿಗೆ ಕೈ ಮುಗಿದನು. ರಾಜನು ಮೆಚ್ಚಿ ಆಭರಣಗಳನ್ನು ನೀಡಿ, ಉತ್ತಮ ಸಂಬಳವನ್ನು ಕೊಟ್ಟು ಸೇವೆಗೆ ನೇಮಿಸಿಕೊಂಡನು.

ಧರ್ಮರಾಜನೇ ಕೇಳು. ಬಾಹುಕನಿಗೆ ಅಲ್ಲಿ ವಾಲಾಖ್ಯ ಎಂಬುವನು ಸ್ನೇಹಿತನಾದನು. ಅವನೊಡನೆ ಸದಾ ಇರುತ್ತಿದ್ದನು. ಹೀಗಿರಲು ಒಂದು ರಾತ್ರಿ ತನ್ನ ಪತ್ನಿ ದಮಯಂತಿಯನ್ನು ಮುದ್ದಾಡಿ ಸರಸ ಸಲ್ಲಾಪದಿಂದಿರುವ ಕನಸನ್ನು ಕಂಡನು. ಎಚ್ಚೆತ್ತು ಅವಳಿಗಾಗಿ ಶೋಕಿಸುತ್ತಿದ್ದನು.

'ನಲ್ಲೆ ನಳಿನಾಕ್ಷಿಯೇ, ಪ್ರೀತಿಯಿಂದ ಬಂದು ಕನಸಿನಲ್ಲಿ ಮಾತಾಡಿದೆ. ನಿನ್ನ ಕರುಣದ ನುಡಿಯ ಆಪ್ತತೆಗೆ ನಾನು ಕರಗಿ ಹೋದೆ, ಶಕ್ತಿ ಗುಂದಿದೆ. ಅಕಟಕಟಾ! ನನ್ನ ಹಂಬಲವನ್ನು ಆ ಮನ್ಮಥನೇ ಬಲ್ಲ' ಎಂದು ಕಾಮನ ಬಾಣಕ್ಕೆ ಈಡಾಗಿ ಹಲುಬುತ್ತಿದ್ದನು.

ಆ ಭ್ರಮಾ ನುಡಿಯನ್ನು ಕೇಳಿ ವಾಲಾಖ್ಯನು ಪಕಪಕನೆ ನಕ್ಕು, 'ಎಲೆ ಬಾಹುಕನೇ, ಯಾವ ಹೆಣ್ಣಿಗಾಗಿ ಶೋಕಿಸುತ್ತಿರುವೆ. ಕಂತೆಗೆ ತಕ್ಕ ಬೊಂತೆ! ಓಹೋ! ನೀನು ಅತಿ ಚೆಲುವ! ನಿನಗೆ ತಕ್ಕವಳಿರಬೇಕು ಆ ತರುಣಿ! ಈ ಲೋಕದಲ್ಲಿ ಕಾಮನಿಗೆ ಕಣ್ಣಿಲ್ಲ! ಅವನೊಬ್ಬ ಮರುಳ' ಎಂದು ಅಪಹಾಸ್ಯ ಮಾಡಿದನು.

ಅದನ್ನು ಸಹಿಸಿಕೊಳ್ಳುತ್ತ ಬಾಹುಕನು ತನ್ನನ್ನೇ ನೋಡಿಕೊಂಡು ಹುಸಿನಕ್ಕು 'ವಾಲಾಖ್ಯನೇ, ಬಹು ಹಿಂದೆ ಒಬ್ಬ ಬ್ರಾಹ್ಮಣನು ತನ್ನ ಸತಿಯನ್ನು ಅಗಲಿದ್ದು, ಅವನು ಆ ವಿರಹದಲ್ಲಿ ನನ್ನೊಡನೆ ತನ್ನ ಪ್ರೇಮಲಹರಿಯನ್ನು ಹೇಳಿಕೊಂಡಿದ್ದ. ಅದು ಇಂದು ಕನಸಿನಲ್ಲಿ ಕಂಡು ಭ್ರಾಂತಿಗೊಳಗಾಗಿ ನುಡಿದೆ. ಅದರಲ್ಲಿ ತಪ್ಪೇನಿದೆ? ನನಗೆ ಹೆಂಡತಿ ಮಕ್ಕಳು ಇಲ್ಲ' ಎಂದು ಹೇಳಿದನು.

# ದಮಯಂತಿಯನ್ನು ಹುಡುಕಿಸಿ ತಂದ ಭೀಮನೃಪ

ಅರಸ ಧರ್ಮರಾಯನೇ ಕೇಳು. ಈ ರೀತಿ ಯಾರಿಗೂ ತಿಳಿಯದೆ ಇಲ್ಲಿ ನಳನು ಇರಲು. ಅಲ್ಲಿ ಭೀಮನೃಪನು ನಳನು ಜೂಜಿನಲ್ಲಿ ತನ್ನ ರಾಜ್ಯವನ್ನು ಸೋತದ್ದನ್ನು ಬ್ರಾಹ್ಮಣರಿಂದ ಕೇಳಿ ತಿಳಿದನು. ಮಗಳು ದಮಯಂತಿಯು ನಳನೊಡನೆ ಕಾಡಿಗೆ ತೆರಳಿದಳು ಎಂದು ಕೇಳಿ ತುಂಬಾ ವ್ಯಥೆ ಪಟ್ಟನು. ಶೋಕದಿಂದ, 'ಹಾ ಮಗಳೇ ದಮಯಂತಿ, ನೀನು ನಿಷಧ ರಾಜನ ಕೈ ಹಿಡಿದು ರಾಣಿಯಾಗಿ ಮೆರೆಯುವುದನ್ನು ವಿಧಿ ಸಹಿಸದೆ ಹೋಯಿತೇ? ನಿನ್ನನ್ನು ಕಾಡಿಗಟ್ಟಿತೇ? ಈ ಭೀಮನೃಪನ ಹೊಟ್ಟೆಯಲ್ಲಿ ಹುಟ್ಟಿದ ನಿನಗೆ ಆ ವಿಧಿ ರಾಜ್ಯ ಸಿರಿಯನ್ನು ಕೊನೆಗಾಣಿಸಿತೇ? ಓ ಮಗಳೇ, ನನಗೆ ಸಿರಿ ಬೆಳಗುವ ನಿನ್ನ ಕಮಲಮುಖ ಕಾಣುತ್ತಿಲ್ಲ. ನನ್ನ ಎದೆ ಮುಗುಳೇ, ಒಮ್ಮೆ ತೋರಿಸು' ಎಂದು ರೋದಿಸಿದನು.

## ಈ ಬಗೆಗೆ ತಂದುದೆ ವಿಧಿಯು ನಿನ್ನನ್ನು ಹರ ಮಹಾದೇವ

ಮಗಳ ಒಲ್ಮೆ, ಆಟ ಪಾಟ, ನಯ ವಿನಯ, ಮುದ್ದು ಮಾಟ, ಬೆಡಗು ಬಿನ್ನಾಣ; ಆ ಸುಂದರ ನಳ ದಮಯಂತಿ ಜೋಡಿಯನ್ನು ನೆನೆಯುತ್ತ ಅತಿನೊಂದು,

'ಮಗಳೇ, ನಿರಾಶೆಯಲ್ಲಿ ಮೋಹದ ಮಕ್ಕಳನ್ನು ಯಾರಿಗೆ ಕೊಟ್ಟು ಹೋದೆ? ವಿಧಿಯು ನಿನ್ನನ್ನು ಈ ಸ್ಥಿತಿಗೆ ದೂಡಿತೆ, ಹರಹರ ಮಹಾದೇವ! ಕಾಡಿನ ಕ್ರೂರ ಮೃಗಗಳಿಂದ ಏನಾದಳೋ? ಪತಿ ಅಗಲಿದನೋ ಏನೋ? ಭೂತ ಬೇತಾಳದ ವಶವಾದಳೋ?' ಎಂದು ಹಲವು ಬಗೆಯಲ್ಲಿ ಯೋಚಿಸುತ್ತ ಶೋಕಿಸಿದನು.

ದಮಯಂತಿಯ ತಾಯಿಯು ಮಗಳನ್ನು ನೆನೆದು, 'ಎಲೆ ತಾಯೆ, ಬಡವರ ಹೊಟ್ಟೆಯಲ್ಲಿ

ಹುಟ್ಟಿ ಸುಖವನ್ನು ಪಡೆಯುವುದು ಬಿಟ್ಟು, ನೀನು ಏಕೆ ಈ ರಾಜನ ಹೊಟ್ಟೆಯಲ್ಲಿ ಹುಟ್ಟಿದೆ? ಅಂತಃಪುರದ ಸುಖದಲ್ಲಿ ಮೆರೆದ ನೀನು ಗೊಂಡಾರಣ್ಯದಲ್ಲಿ ಹೇಗೆ ಇರುವೆ?' ಎಂದು ಮರುಗಿದಳು.

ಈ ರೀತಿ ಸತಿಪತಿಗಳಿಬ್ಬರೂ ಶೋಕಿಸಿ, ನೋವನ್ನು ಸಹಿಸಲಾರದೆ ಅಗ್ನಿ ಪ್ರವೇಶ ಮಾಡಲು ತೀರ್ಮಾನಿಸಿ ಹೋಗುತ್ತಿದ್ದರು.

ಧರ್ಮರಾಜನೇ ಕೇಳು. ಅಷ್ಟರಲ್ಲಿ ಅವರಿಗೆ 'ಮತಿಯುತ ವಿವೇಕಿ ರಾಜನೇ ಚಿಂತೆಯನ್ನು ಬಿಡು. ಪತಿವ್ರತೆ ದಮಯಂತಿಗೆ ಹಾನಿಯಾಗುವುದೇ? ಅವಳು ಸುಖದಲ್ಲಿದ್ದಾಳೆ' ಎಂದು ನಭದಿಂದ ಅಶರೀರವಾಣಿ ಕೇಳಿಸಿತು.

ಅದನ್ನು ಕೇಳಿದ ವಿಪ್ರಸಮೂಹದಲ್ಲಿಯ ಒಬ್ಬ ಮುನಿಯು 'ಇದು ಪರಮಾನಂದ ಮಯನಾದ ಭಗವಂತನ ವಾಕ್ಯ. ದಮಯಂತಿ ಮತ್ತು ನಳನಪ್ಪರು ಸುಖಕ್ಷೇಮ ದಿಂದಿರುವರು. ನೀವು ಇಂದು ಅವರನ್ನು ಹುಡುಕಲು ಗೂಢಚಾರರನ್ನು ಕಳುಹಿಸಿ' ಎಂದು ಹೇಳಿದನು.

ಆ ಮುನಿಯ ಮಾತಿನಂತೆ ಅರಮನೆಗೆ ಬಂದು ಗಾಢ ಚಿಂತೆಯಲ್ಲಿದ್ದಾಗ ಸೂರ್ಯನು ಪಶ್ಚಿಮಾಂಬುಧಿಗೆ ಇಳಿದನು. ಇಡೀ ರಾತ್ರಿ ಭೀಮರಾಜನಿಗೆ ಮುದ್ದು ಮಗಳು ಮತ್ತು ಸತ್ಯಸಂಧ ಅಳಿಯನ ಚಿಂತೆ ಆವರಿಸಿ ನಿದ್ದೆ ಹತ್ತಲಿಲ್ಲ. ಅಷ್ಟರಲ್ಲಿ ಬೆಳಗಾಯಿತು. ರಾಜನು ಬ್ರಾಹ್ಮಣರನ್ನು ಕರೆಸಿ,

'ನೀವು ದಯಮಾಡಿ – ಈ ಧರೆಯಲ್ಲಿ ನನ್ನ ಮಗಳು ದಮಯಂತಿ ಮತ್ತು ನಳಮಹಾರಾಜ ಎಲ್ಲಿರುವರೆಂದು ಹುಡುಕಿ ಹೇಳಬೇಕು. ಹಾಗೆ ಅವರನ್ನು ಕಂಡು ಕರೆತಂದವರಿಗೆ ನನ್ನ ರಾಜ್ಯದ ಅರ್ಧ ಭಾಗವನ್ನು ನಿಶ್ಚಿತವಾಗಿ ಕೊಡುತ್ತೇನೆ' ಎಂದು ಹೇಳಿ ಉಪಚರಿಸಿ ಕಳುಹಿಸಿದನು.

ಅರಸನ ಗೂಢಚಾರರು ಪಶ್ಚಿಮ, ದಕ್ಷಿಣ, ಪೂರ್ವ ಸಮುದ್ರಗಳವರೆಗೆ ಮತ್ತು ಉತ್ತರದ ಕುರುರಾಜ್ಯದವರೆಗೆ ನಳದಮಯಂತಿಯ ಹುಡುಕಾಟ ನಡೆಸಿದರು. ಅವರು ಹಲವಾರು ನಗರ, ಕಾಡು ಹಾದಿ, ಬೆಟ್ಟಗುಡ್ಡಗಳಲ್ಲದೆ ದಿಗಂತದವರೆಗೂ ಹುಡುಕುತ್ತ ಸಾಗಿದರು. ನಳ ಮತ್ತು ದಮಯಂತಿ ಪತ್ತೆ ಆಗಲಿಲ್ಲ. ಆದರೆ ಪ್ರಯತ್ನ ಬಿಡದೆ ಹಲವಾರು ದಿನಗಳು ಹುಡುಕಾಟ ನಡೆಸುತ್ತಲೇ ಇದ್ದರು. ಅವರು ಹೋದ ನಗರಗಳ ಬೀದಿಗಳ ಮಧ್ಯದಲ್ಲಿ, ನೆರೆದ ಸಭೆಗಳಲ್ಲಿ, ನಡೆವ ಮಾರ್ಗದಲ್ಲಿ ಸಂಚರಿಸುವವರನ್ನೆಲ್ಲಾ ಕಂಡು ಕೇಳುತ್ತ ಹೋದರು. ಎಲ್ಲಿಯೂ ಅವರ ಸುಳಿಹು ಸಿಗದಿರಲು, ಹುಡುಕುವ ಇನ್ನೂ ಹಲವು ಬಗೆಯ ಬಗ್ಗೆ ಚಿಂತಿಸುತ್ತ ಸಾಗುತ್ತಿದ್ದರು. ಅಂತಹವರಲ್ಲಿ ಮೂರು ಜನರು ಚೈದ್ಯನಗರಿಯನ್ನು ಸೇರಿದರು.

ಅಲ್ಲಿ ವಿಚಾರಿಸಲು ಅದು ಆ ರಾಜನ ಯಾಗ ಸಮಯವೆಂದು ತಿಳಿಯಿತು. ಆ ಮೂವರು ತಮಗೆ ದಕ್ಷಿಣೆಯ ಜೊತೆಗೆ ಭೂರಿ ಭೋಜನ ಸಿಗುವುದೆಂದು ಯಜ್ಞ ಮಂಟಪವನ್ನು ಹೊಕ್ಕರು.

## ಸುದೇವನು ಮನದೊಳನುಮಾನಿಸಿದನೀ ಮಾನಿನಿ ಮಹಾಸತಿಯೆನುತ

ರಾಜನು ಬ್ರಾಹ್ಮಣರ ಮಂತ್ರಘೋಷದೊಡನೆ ಅಗ್ನಿಯನ್ನು ಆರಾಧಿಸುತ್ತಿದ್ದನು. ಆ ರಾಜನ ಮಗಳಾದ ಸುನೀತಿಯನ್ನು ದಮಯಂತಿಯು ಗೌರವದಿಂದ ಸೇವೆಗೈಯುತ್ತಿದ್ದಳು. ಆ ಸೈರಂಧ್ರಿಯನ್ನು ಆ ಬ್ರಾಹ್ಮಣರಲ್ಲಿ ಒಬ್ಬನಾದ ಸುದೇವನು ನೋಡಿದನು. ಮನಸ್ಸಿನಲ್ಲಿ ಆಕೆಯೇ ದಮಯಂತಿ ಇರಬೇಕೆಂದು ಅನುಮಾನಿಸಿದನು. ಆಕೆಯ ಗಾಂಭೀರ್ಯ ಗುಣ ಲಕ್ಷಣಗಳನ್ನು ಗಮನಿಸುತ್ತ ಆಕೆ ಮಹಾಪತಿವ್ರತೆಯೆಂದುಕೊಂಡನು. ನೋಡನೋಡುತ್ತ ಅಚ್ಚರಿಗೊಳಗಾದನು.

ಆಭರಣಗಳನ್ನು ತೊರೆದು, ಮೈಲಿಗೆಯ ಸೀರೆಯುಟ್ಟು ಕೈಯನ್ನು ಗಲ್ಲಕ್ಕೆ ಆನಿಸಿ ನಿಂತ ದಮಯಂತಿಯನ್ನು ಸುದೇವನು ನೋಡಿದನು! ಅವಳು ಮೋಡ ಮುಸುಕಿದ ಚಂದ್ರಬಿಂಬವೋ, ಹಗಲು ಬೆಳಗುವ ದೀಪದ ಕಾಂತಿಯೋ, ಹೊಗೆ ಆವರಿಸಿದ ಚಿತ್ರ ಪ್ರತಿಮೆಯೋ ಎನ್ನುವಂತೆ ಕಾಣುತ್ತಿದ್ದಳು.

## ಇದು ಪತಿವ್ರತ ಧರ್ಮವಹುದೀ ಸುದತಿ ತೊರೆದಿಹಳೆಲ್ಲವನು

ಇದು ಪತಿವ್ರತ ಧರ್ಮ. ಈ ಚೆಲುವೆ ಎಲ್ಲವನ್ನೂ ತೊರೆದಿದ್ದಾಳೆ. ಈ ರಾಜ ಪತ್ನಿಯನ್ನು ಕಂಡು ಮಾತನಾಡಿಸುವೆ ಎಂದು ಸುದೇವ ಅವಳ ಹತ್ತಿರಕ್ಕೆ ಹೋಗಿ,

'ತಾಯಿಯೇ, ಇದೇಕೆ ಹೀಗೆ ಇರುವಿರಿ? ತಮ್ಮ ಮುಖ ಬಾಡಿದೆ. ಮಲಿನವಾದ ಸೀರೆ ಉಡಲು ಕಾರಣವೇನು?' ಎಂದು ವಿಚಾರಿಸಿ ಮತ್ತೆ ತನ್ನ ವಿವರವನ್ನು ಹೀಗೆ ಹೇಳಿದನು. 'ನಾನು ವಿದರ್ಭ ಪಟ್ಟಣದಿಂದ ಬಂದಿದ್ದೇನೆ. ನಾನು ಬ್ರಾಹ್ಮಣೋತ್ತಮನು. ನನ್ನ ಹೆಸರು ಸುದೇವ. ನಿಮ್ಮ ತಂದೆ ಭೀಮನೃಪನು ನಿಮ್ಮನ್ನು ಹುಡುಕಲು ಕಳುಹಿಸಿದ್ದಾನೆ. ನಾನು ನಿಮ್ಮ ಸಹೋದರನ ಸ್ನೇಹಿತ. ನನ್ನ ಒಂದು ವಿಜ್ಞಾಪನೆಯನ್ನು ಆಲಿಸಿ' ಎಂದು ಕೈ ಮುಗಿದು ವಿನಮ್ರವಾಗಿ ಕೇಳಿಕೊಂಡನು.

'ನಮ್ಮ ದೊರೆ ಭೀಮರಾಜ ಆತನ ಸತಿ ಸುತರು, ಬಂಧು ಬಾಂಧವರು, ನಿಮ್ಮ ಕುಮಾರರು ಕ್ಷೇಮದಿಂದಿದ್ದಾರೆ. ನಳಮಹಾರಾಜನು ರಾಜ್ಯ ತೊರೆದು ನಿಮ್ಮೊಂದಿಗೆ ಕಾಡಿಗೆ ಹೋದುದನ್ನು ಕೇಳಿ – ನಿಮ್ಮವರೆಲ್ಲ ಶೋಕ ಸಾಗರದಲ್ಲಿ ಮುಳುಗಿದ್ದಾರೆ.

ದುಃಖವನ್ನು ತಡೆಯಲಾಗದೆ ರಾಜ ದಂಪತಿಗಳು ನಿನ್ನನ್ನು ಹುಡುಕಿ ಬರಲು ಕಳುಹಿಸಿದ್ದಾರೆ. ನಾನು ಈ ಭೂಮಿಯಲ್ಲೆಲ್ಲ ಅರಸುತ್ತ ಇಲ್ಲಿಗೆ ಬಂದು ನಿಮ್ಮನ್ನು ಕಂಡೆನು. ನನ್ನ ಪುಣ್ಯ ಕೈಗೂಡಿತು.'

ಆ ಮಾತುಗಳನ್ನು ಕೇಳುತ್ತ ದಮಯಂತಿ ದುಃಖದ ಕಣ್ಣೀರಿನಲ್ಲಿ ತೋಯ್ದು ಹೋದಳು. ಆ ವಿಪ್ರೋತ್ತಮನನ್ನು ಗೌರವದಿಂದ ಕಂಡು ತನ್ನವರ ಬಗ್ಗೆ ಮತ್ತೆ ಮತ್ತೆ ವಿಚಾರಿಸಿದಳು. ಚೇದಿಯ ರಾಣಿಗೆ ಸುದೇವನು ಬಂದಿರುವ ವಿಷಯ ತಿಳಿಸಿದಳು. ಆ ರಾಣಿಯು ಅವನನ್ನು ಹೀಗೆ ಕೇಳಿದಳು :

'ಎಲೆ ವಿಪ್ರೋತ್ತಮ, ನೀನು ಯಾರು? ಬಂದ ಸಂಗತಿ ಏನು?'

'ತಾಯಿಯೇ ಕೇಳು. ವಿದರ್ಭ ರಾಜನು ಮಗಳು ದಮಯಂತಿಯು ರಾಜ್ಯ ತೊರೆದು ಪತಿಯೊಡನೆ ಕಾಡಿಗೆ ಹೋದ ವಿಷಯ ಕೇಳಿ ತುಂಬಾ ದುಃಖಿತನಾದನು. ಮಗಳನ್ನು ಹುಡುಕಿ ಕರೆತರಲು ಆಜ್ಞಾಪಿಸಿದನು. ಹುಡುಕುತ್ತ ಇಲ್ಲಿಗೆ ಬಂದು ಸತಿ ಶಿರೋಮಣಿ ದಮಯಂತಿಯನ್ನು ಕಂಡೆ' ಎಂದು ಸುದೇವನು ಕೈಮುಗಿದು ವಿನಂತಿಸಿದನು.

ಅದನ್ನು ಕೇಳಕೇಳುತ್ತಲೇ ಶೋಕಭರಿತಳಾದ ಆ ರಾಣಿ 'ಶಿವ ಶಿವಾ!!' ಎಂದು ಹೇಳುತ್ತಾ ದಮಯಂತಿಯನ್ನು ತೆಗೆದು ಅಪ್ಪಿಕೊಂಡಳು. 'ಮಗಳೇ, ನಿನಗೆ ರಾಜ್ಯ ಸಂಪದವು ಜುಗುಪ್ಸೆಯಾಯಿತೇ? ಈ ಮಹಾ ವ್ಯಥೆಯನ್ನು ನಿನ್ನ ಹಣೆಯಲ್ಲಿ ವಿಧಿ ಬರೆದನೇ? ನಳಮಹಾರಾಜ ಎಲ್ಲಿಗೆ ಹೋದನೋ? ಕಾಲಗತಿ ಹೀಗಾಯಿತಲ್ಲ' ಎಂದು ಮರುಗುತ್ತ ಮಾತು ಮುಂದುವರೆಸಿ 'ಮಗಳೇ, ಶೋಕವನ್ನು ಬಿಡು. ನಾನು ನಿನ್ನ ತಾಯಿಯ ತಂಗಿ. ಈವರೆಗೆ ನನ್ನ ಅರಮನೆಯಲ್ಲಿ ತುಂಬಾ ತುಂಬಾ ನೊಂದಿರುವೆ. ನೀನು ಸುನಂದೆಗೆ ಸರಿ ಜೋಡಿಯಾದವಳು. ನೀನೂ ನನ್ನ ಮಗಳೇ' ಎಂದು ಹೇಳಿ ಪ್ರೀತಿಯಿಂದ ಮುದ್ದಿಟ್ಟು ವಾತ್ಸಲ್ಯವನ್ನು ತೋರಿದಳು.

ಚಿಕ್ಕಪ್ಪನಾದ ದೊರೆ ಸುಬಾಹು ತುಂಬಾ ಮರುಗಿ,

'ಮಗಳೇ ದಮಯಂತಿ, ನೀನು ಪತಿಯಿಲ್ಲದೆ ಚಿಂತೆಯಿಂದ ಎಲ್ಲವನ್ನೂ ತೊರೆದು ಕರಗಿ ಕುಂದಿದೆ. ನನಗೆ ನೀನು ಯಾರೆಂದು ಗೊತ್ತಿರಲಿಲ್ಲ. ನಾನು ನಿನ್ನ ಪತಿಯನ್ನು ಹುಡುಕಿ ಕರೆಯಿಸಿಕೊಡುವೆ. ನೀನು ಚಿಂತಿಸಬೇಡ' ಎಂದು ಹೇಳಿ, ಅವಳ ಕಣ್ಣೀರನ್ನು ತನ್ನ ವಸ್ತ್ರದ ಸೆರಗಿನಿಂದ ಒರೆಸಿ ಸಂತೈಸಿದನು. ಅನಂತರ ಓಲಗಕ್ಕೆ ಬಂದು ಬ್ರಾಹ್ಮಣ ಸುದೇವನನ್ನ ಕರೆಸಿದನು. ಅವನಿಗೆ ರತ್ನ, ವಸ್ತ್ರಾದಿಗಳನ್ನು ಕಾಣಿಕೆ ನೀಡಿ ಉಪಚರಿಸಿ ಕಳುಹಿಸಿದನು. ಸುದೇವನು ತಡಮಾಡದೆ ಭೀಮನೃಪಾಲನ ಓಲಗಕ್ಕೆ ಬಂದನು.

## ಗಂಡನಗಲಿದ ಚಿಂತೆಯಲಿ ಮುಖ ಬಾಡಿ ದೇಹವನು ದಂಡಿಸಿದ ಳನ್ನದಲಿ

ಅರಸ ಧರ್ಮರಾಜನೇ ಕೇಳು. ವಿದರ್ಭ ರಾಜನು ಮನಸ್ಸಿನಲ್ಲಿ ಮರುಗುತ್ತಿರುವ ಸಮಯದಲ್ಲಿ ವಿಪ್ರೋತ್ತಮನಾದ ಸುದೇವನು ಬಂದು ಕೈಮುಗಿದು ಈ ರೀತಿ ಹೇಳಿದನು :

'ಪ್ರಭುವೇ, ನಾನು ದಮಯಂತಿಯನ್ನು ಚೈದ್ಯಪುರದಲ್ಲಿ ಕಂಡೆನು. ಅವಳು ಚಿಕ್ಕಮ್ಮನೊಂದಿಗೆ ಸಂತೋಷದಿಂದಿದ್ದಾಳೆ' ಎಂದು ನುಡಿಯುತ್ತ ಮತ್ತೆ ಮಾತು ಮುಂದುವರೆಸಿದನು. 'ನಾನು ತಮ್ಮ ಮಗಳನ್ನು ಕಂಡು ಮಾತಾಡಿದೆ. ಅವಳ ತಲೆಗೂದಲು ಅಸ್ತವ್ಯಸ್ತವಾಗಿದ್ದು, ಮಲಿನ ವಸನವನ್ನು ಉಟ್ಟಿದ್ದಾಳೆ. ಗಂಡನನ್ನು ಅಗಲಿದ ಚಿಂತೆಯಲ್ಲಿ ಅನ್ನವನ್ನು ಸೇವಿಸದೆ ದೇಹ ದಂಡಿಸಿರುವುದರಿಂದ ಮುಖ ಬಾಡಿದೆ. ಮನಸ್ಸು ಕುಗ್ಗಿ ಮುದುಡಿಕೊಂಡಿದೆ. ತನ್ನ ಗಂಡನನ್ನು ಹುಡುಕಿ ತಿಳಿಸುವರಾರು ಎಂದು ಮನದಲ್ಲಿಯೇ ದುಃಖಿಸುತ್ತಿದ್ದಾಳೆ.'

ಮಗಳ ಸುದ್ದಿಯನ್ನು ಕೇಳಿ ಭೀಮರಾಜನ ಮುಖ ಅರಳಿತು. ಅವನ ಮನಸ್ಸು ಉಲ್ಲಾಸದಿಂದ ರೋಮಾಂಚನಗೊಂಡಿತು. ತಕ್ಷಣ ಸ್ತ್ರೀಯರನ್ನು, ಆಪ್ತ ಸಚಿವರನ್ನು ಕರೆದು ಅವರಿಗೆ ಮಗಳನ್ನು ಕರೆತರಲು ಹೇಳಿದನು. ಅವರಿಗೆ ರತ್ನಾಭರಣಗಳನ್ನು ಉಡುಗೊರೆಯಾಗಿ ನೀಡಿ ಕಳುಹಿಸಿದನು.

ಅವರು ಚೈದ್ಯ ನಗರಕ್ಕೆ ಬಂದು ಸುಬಾಹು ದೊರೆಯನ್ನು ಕಂಡರು. ಆ ದೊರೆಯು ಭೀಮನೃಪಾಲನ ಕಡೆಯವರ ಕುಶಲವನ್ನು ಕೇಳಿ ತಿಳಿದನು. ಬಂದವರು,

'ಮಹಾರಾಜನೇ, ನಮ್ಮ ಭೀಮನೃಪಾಲನು ದಮಯಂತಿಯನ್ನು ಕಳುಹಿಸಬೇಕೆಂದು ತಿಳಿಸಿರುವನು. ಹರುಷದಿಂದ ತಮಗೆ ಉಡುಗೊರೆಗಳನ್ನು ಕಳುಹಿಸಿರುವನು, ಸ್ವೀಕರಿಸಿ' ಎಂದು ಹೇಳಿ ನೀಡಿದರು.

ಮಹಾರಾಜ ಸುಬಾಹು ತಕ್ಷಣ ಮಂತ್ರಿಗಳನ್ನು ಕರೆಸಿ ಭೀಮನಪುರಕ್ಕೆ ಪ್ರಯಾಣದ ವ್ಯವಸ್ಥೆ ಮಾಡಿದನು. ದಮಯಂತಿಯನ್ನು ಕರೆದು,

'ಮಗಳೇ, ನೀನು ನಮ್ಮಲ್ಲಿ ತಿಂಗಳು ಕಾಲ ಕಷ್ಟದಿಂದ ಜೀವನ ಕಳೆದೆ. ಕಠಿಣ ದಿನ ಕಳೆಯಿತು. ನಿನಗೆಲ್ಲ ಶುಭವಾಗುತ್ತದೆ' ಎಂದು ಹೇಳಿ ಅತಿ ಪ್ರೇಮ ವಾತ್ಸಲ್ಯಗಳೊಂದಿಗೆ ಅಮೂಲ್ಯ ಆಭರಣಗಳನ್ನು ಕೊಟ್ಟನು.

ಪಲ್ಲಕ್ಕಿಗಳನ್ನು ತರಿಸಿ ತರುಣಿಯರ ಸಮೂಹದಲ್ಲಿ ದಮಯಂತಿಯನ್ನು ಕುಳ್ಳಿರಿಸಿದನು.

ತಾನು ಆನೆಯ ಮೇಲೆ ಕುಳಿತು ಹೊರಟನು. ಹಲವಾರು ವಾದ್ಯ ಘೋಷಗಳೊಂದಿಗೆ ಆನೆ, ಕುದುರೆ, ಕಾಲಾಳುಗಳ ಸಮೂಹದೊಡನೆ ವಿದರ್ಭ ನಗರವನ್ನು ಪ್ರವೇಶಿಸಿದನು.

ಅರಸನ ಮಗಳು ದಮಯಂತಿ ಬಂದ ವಾರ್ತೆಯನ್ನು ದೂತರು ಪ್ರೀತಿಯಿಂದ ಜನರಿಗೆ ತಿಳಿಸಲು, ಅವರು ಆನಂದದಿಂದ ಕುಣಿದಾಡಿದರು. ದೂತರು ಬಂದು ಭೀಮರಾಜನಿಗೆ ಕೈಮುಗಿದು 'ದಮಯಂತಿ ಬಂದಳು' ಎಂದು ತಿಳಿಸಿದರು. ಅದನ್ನು ಕೇಳಿ ಹರ್ಷಗೊಂಡ ರಾಜನು ತನ್ನ ಚತುರಂಗಬಲದೊಡನೆ ಹೊರಟನು. ಮಗಳನ್ನು ಮತ್ತು ಬಂಧು ಸುಬಾಹುವನ್ನು ಪ್ರೀತಿಯಿಂದ ಸ್ವಾಗತಿಸಿ ಅರಮನೆಗೆ ಕರೆದುಕೊಂಡು ಬಂದನು.

## ನೀರೊಗುವ ಕಣ್ಣೀರಿನಲಿ ಸಂತೈಸಿದಳು ನಿಜಸುತರ

ಧರ್ಮರಾಜನೇ ಕೇಳು. ಆ ನಗರದಲ್ಲಿ ನಡೆದ ಸಂಭ್ರಮ, ಆನಂದ, ಉತ್ಸವಗಳನ್ನು ಏನೆಂದು ವರ್ಣಿಸಲಿ? ಅಂದು ಅರಮನೆಯಲ್ಲಿ ಆತುರದಿಂದ ಓಡಿಬಂದ ತಾಯಿಯು ಮಗಳು ದಮಯಂತಿಯನ್ನು ಬಿಗಿದಪ್ಪಿಕೊಂಡು ಸಂತೋಷಪಟ್ಟಳು. ಬಂಧು ಬಳಗದವರು ಹಾಗೂ ಅಂತಃಪುರದ ಯುವತಿಯರು ತಮ್ಮ ರಾಜಪುತ್ರಿಯನ್ನು ಕಂಡು ಉಲ್ಲಾಸ ಗೊಂಡರು. ಅವಳ ಮಕ್ಕಳು ಓಡಿಬಂದು ಅಪ್ಪಿಕೊಂಡರು.

ಮಗ ಇಂದ್ರಸೇನನನ್ನು ಬಾಚಿ ತಬ್ಬಿಕೊಂಡ ದಮಯಂತಿಯು, ಮಗಳು ಚಂದ್ರಾಸ್ಯಳನ್ನು ತೊಡೆಯೊಳಗಿಟ್ಟುಕೊಂಡು ತಲೆಮೂಸಿ ಮುದ್ದಾಡಿದಳು. ಆ ಮಕ್ಕಳ ಮುಖವನ್ನು ನೋಡುತ್ತ ಮೊಲೆಯ ಹಾಲು ಜಿನುಗುವ ಆ ಜನನಿ, ಅದಕ್ಕೂ ಮಿಗಿಲಾಗಿ ಹರಿವ ಕಂಬನಿ ನೀರಿನಲ್ಲಿ ಅವರನ್ನು ಸಂತೈಸಿದಳು.

ಶ್ರೀಹರಿಯ ಕೃಪೆಯಿಂದ ಭೀಮನೃಪಾಲನು ಬಂಧು ಸುಬಾಹು ಮತ್ತಿತರರನ್ನು ಗೌರವದಿಂದ ಕಂಡು ಉಚಿತ ರೀತಿಯಲ್ಲಿ ಸತ್ಕರಿಸಿ, ಉಪಚರಿಸಿ ಬೀಳ್ಕೊಟ್ಟನು. ದಮಯಂತಿಯು ಪತಿಯನ್ನು ಅಗಲಿದ ಚಿಂತೆಯಲ್ಲಿ ಮನಗುಂದಿದಳು. ಒಳಿತಿಗಾಗಿ ಚೆನ್ನಿಗರಾಯ ಶ್ರೀವಿಷ್ಣುವನ್ನು ನೆನೆಯುತ್ತಿದ್ದಳು.

# ದಮಯಂತಿಯ ಮರು ಸ್ವಯಂವರಕ್ಕೆ ಸಾರಥಿಯಾದ ನಳನೃಪ

ರಾಜೇಂದ್ರ ಧರ್ಮನೃಪಾಲನೇ ಕೇಳು. ದಮಯಂತಿಯು ತವರಿನಲ್ಲಿ ಸಕಲ ರಾಜ್ಯ ವೈಭವವನ್ನು ತೊರೆದಳು. ತಲೆ ಬಾಚಿಕೊಳ್ಳದೆ ಧೂಳು ಮುಸುಕಿ, ಮಲಿನ ವಸನಗಳಲ್ಲಿದ್ದು ಸದಾ ತನ್ನ ಪತಿಯ ವ್ಯಥೆಯಲ್ಲಿದ್ದಳು. ಅದನ್ನು ನೋಡಿದ ಅವಳ ತಾಯಿ 'ನಳನು ರಾಜ್ಯವನ್ನು ಕಳೆದುಕೊಂಡು ಕಾಡಿನಲ್ಲಿ ನಿನ್ನನ್ನು ಹೇಗೆ ಅಗಲಿದ ಹೇಳು' ಎಂದು ಕೇಳಿದಳು. ಆಗ ದಮಯಂತಿಯು ಪುಷ್ಕರನು ಕಪಟದಲ್ಲಿ ರಾಜ್ಯವನ್ನು ಅಪಹರಿಸಿದ್ದು; ಕಾಡಿನಲ್ಲಿ ನಳ ವಸ್ತ್ರಹೀನನಾಗಿ ತನ್ನ ಸೀರೆಯ ಅರ್ಧಭಾಗ ಉಟ್ಟಿದ್ದು; ತಾನು ನಿದ್ದೆ ಮಾಡುವಾಗ ತೊರೆದು ಹೋಗಿದ್ದು; ತಾನು ಚೈದ್ಯ ನಗರಿ ತಲುಪಿ ಅಲ್ಲಿ ಸೈರಂಧ್ರಿ ಯಾಗಿದ್ದುದನ್ನು ವಿವರಿಸಿ ಹೇಳಿದಳು. ಅಮ್ಮನನ್ನು ತಬ್ಬಿಕೊಂಡು,

## ದಾನವಾಮರರೊಳಗೆ ಕಾಣೆ ಸಮಾನರನು ನಳನೃಪಗೆ

'ಎಲೆ ತಾಯಿ, ನನ್ನ ಪುಣ್ಯದ ಹಾನಿಯನ್ನು ಏನೆಂದು ಹೇಳಲಿ? ನನ್ನ ಹಾಗೆ ತೊಳಲಿ ಬಳಲಿದವರು ಯಾರಿದ್ದಾರೆ ಈ ಲೋಕದಲ್ಲಿ? ನಳನೃಪನಿಗೆ ಸಮಾನರಾದವರನ್ನು ದಾನವರಲ್ಲಿ, ದೇವತೆಗಳಲ್ಲಿ ನಾನು ಕಾಣೆ. ಈಗ ಅವನನ್ನು ಪಡೆಯಲು ಏನು ಮಾಡುವುದು' ಎಂದು ಕಣ್ಣೀರುಗರೆದು ಮತ್ತೆ ನುಡಿದಳು,

'ಅಮ್ಮ, ನಾನು ಯಾರಿಗೆ ಕೇಡು ಮಾಡಿದ್ದೆನೋ? ಹಿರಿಯರಿಗೆ ಏನು ನಿಂದಿಸಿದ್ದೆನೋ? ಯಾರ ವ್ರತಾಚಾರಣೆಗೆ ಅಡ್ಡಿಯಾಗಿದ್ದೆನೋ? ಯಾರಿಗೆ ಬಳಲಿಸಿ ದುಃಖವನ್ನುಂಟು ಮಾಡಿದ್ದೆನೋ? ಯಾವ ತಪೋವ್ರತರನ್ನು ಜರೆದಿದ್ದೆನೋ? ನನ್ನ ಸಂಸಾರ ಹೀಗಾಯಿತಲ್ಲ!

ಶಿವ ಶಿವಾ!!' ಎಂದು ಶೋಖಿಸಿದಳು. ತಾಯಿ ಸಮಾಧಾನಪಡಿಸುತ್ತಿರಲು ದುಃಖ ಉಮ್ಮಳಿಸಿ ಬಂದು,

'ಅಮ್ಮ, ನನ್ನ ತೊರೆದು ನನ್ನ ಪತಿ ಈ ಭೂಮಿಯ ಮೇಲೆ ಎಲ್ಲಿರುವನೋ? ಪರಸ್ತ್ರೀಗೆ ಮರುಳಾದನೋ? ತಪಸ್ವಿಯಾದನೋ? ರಾಕ್ಷಸರ ಬಲೆಗೆ ಸಿಕ್ಕಿದನೋ? ವಿತಳಕಿಳಿದನೋ? ಅಮರ ಲೋಕಕ್ಕೆ ನಡೆದನೋ? ನನಗೆ ನಳಭೂಪ ಕಾಣುತ್ತಿಲ್ಲ. ನನಗಿನ್ನಾರು ಗತಿ?' ಎಂದು ಮರುಗಿ, ಮತ್ತೆ ನೋವನ್ನು ಹೀಗೆ ತೋಡಿಕೊಂಡಳು,

'ಪತಿವಿಹೀನೆಗೆ ಸುವ್ರತ, ಸುಭೋಜನ ಸೌಖ್ಯ ಸಮ್ಮತವೇ? ಸತಿಯರಿಗೆ ಪತಿಯೇ ಪರದೈವವೆಂದು ಎಲ್ಲ ಶ್ರುತಿಗಳು ಸಾರುತ್ತಿವೆ. ಪತಿವಿಹೀನೆಗೆ ಸದ್ಗತಿಯಿಲ್ಲ. ಅಮ್ಮ, ನೀನು ನನ್ನ ಗಂಡ ಎಲ್ಲಿರುವನೆಂದು ಹುಡುಕಿಸಿ ಕೊಡು. ಅವನಿಲ್ಲವಾದ ಮೇಲೆ ನಾನು ಪ್ರಾಣತ್ಯಾಗ ಮಾಡುವೆ' ಎಂದು ಹೇಳಿ ತಾಯಿಯ ಸೆರಗಿನಲ್ಲಿ ಮುಖ ಮುಚ್ಚಿಕೊಂಡಳು.

ತಾಯಿಯು ಮಗಳ ಮಾತಿಗೆ ಕರಗಿ ಕಂಬನಿ ಮಿಡಿಯುತ್ತ ತನ್ನ ಪತಿ ಭೀಮನೃಪನಲ್ಲಿ ಮಗಳ ಬೇಡಿಕೆಯನ್ನು ತಿಳಿಸಿದಳು. ರಾಜನು ತಕ್ಷಣವೇ ಆ ಕುರಿತು ಗಂಭೀರವಾಗಿ ಆಲೋಚಿಸಿದನು.

ಧರ್ಮರಾಜನೇ ಕೇಳು. ಭೀಮನೃಪನು ಬ್ರಾಹ್ಮಣರನ್ನು ಕರೆಸಿದನು. ಅವರಿಗೆ ಅಮೂಲ್ಯ ವಸ್ತುಗಳನ್ನು ಕಾಣಿಕೆಯಾಗಿ ನೀಡಿ,

'ನಿಷಧಪತಿ ನಳಮಹಾರಾಜನು ಎಲ್ಲಿರುವನೆಂದು ನೀವು ಸಮುದ್ರ ಪರ್ಯಂತ ಹುಡುಕಿ ಕರೆದು ತನ್ನಿ' ಎಂದು ಆಜ್ಞೆ ಮಾಡಿದನು.

ಅವರು ಆಜ್ಞಾಪಾಲಕರಾಗಿ ಹೊರಡುವಾಗ ದಮಯಂತಿಯು ಅವರನ್ನು ಕರೆದು,

'ವಿಪ್ರೋತ್ತಮರೇ, ನಳನೃಪತಿಯು ಈಗ ರಾಜ ತೇಜಸ್ಸನ್ನು ಬಿಟ್ಟು ಸಾಮಾನ್ಯ ರಂತಿರುವನು. ಅವನ ಗುರುತು ಸಿಗುವುದು ಕಠಿಣ. ನೀವು ಹೋದ ಸ್ಥಳಗಳಲ್ಲಿ, ರಾಜ ಸಭೆಗಳಲ್ಲಿ ಅವನನ್ನು ಪತ್ತೆಹಚ್ಚಲು ನಾನು ಹೇಳುವ ಈ ಸಂಗತಿಯನ್ನು ಪ್ರಕಟಪಡಿಸಿ : ಕಾಡಿನಲ್ಲಿ ಸತಿ ಉಟ್ಟ ಸೀರೆಯಲ್ಲಿಯೇ ಅರ್ಧವನ್ನು ಉಟ್ಟುಕೊಂಡು, ಅವಳನ್ನು ಕಾಡಿನಲ್ಲಿಯೇ ಬಿಟ್ಟು ಹೋದವರು ಯಾರಾದರೂ ಉಂಟೆ?'

ಈ ಮಾತನ್ನು ನುಡಿಯುತ್ತ ದಮಯಂತಿ ಸ್ವಲ್ಪ ತಡೆದು, 'ನಳನೃಪ ಅಲ್ಲಿದ್ದರೆ ಅದಕ್ಕೆ ಉತ್ತರಿಸುವನು. ಅವನನ್ನು ಗುರುತಿಸಿ. ಅವನ ಪ್ರತಿ ನುಡಿ ನಡೆಯನ್ನು ನನಗೆ ಯಾವುದೇ ಸಂದೇಹಕ್ಕೊಳಗಾಗದಂತೆ ಬಂದು ಹೇಳಿ' ಎಂದು ತಿಳಿಸಿ ಅವರನ್ನು ಗೌರವದಿಂದ ಬೀಳ್ಕೊಟ್ಟಳು.

ಅನಂತರ ಅವರು ನಳನನ್ನು ಹುಡುಕುತ್ತ ಹಲವು ರಾಜರ ಆಸ್ಥಾನಗಳಿಗೆ ಹೋದರು. ಅನೇಕ ದಿಕ್ಕುಗಳ ವಿವಿಧ ನಗರಗಳಿಗೆ ಹೋದರು. ಸಮುದ್ರದವರೆಗಿನ ಭೂಮಿಯ ಮೇಲಿನ ಎಲ್ಲ ಸ್ಥಳವನ್ನು, ಗಿರಿ ವನಗಳನ್ನು, ಋಷ್ಯಾಶ್ರಮಗಳನ್ನು ಹೊಕ್ಕು ನೋಡಿದರು. ದೇಹಕ್ಕೆ ಆಯಾಸವಾದರೂ ಲೆಕ್ಕಿಸದೆ ಹುಡುಕುತ್ತ ಸಾಗಿದರು. ಹಾಗೆ ಹೋಗುವಾಗ ಅವರು ಓರ್ವ ಭಿಕ್ಷಾಟನೆ ಮಾಡುವ ಬ್ರಾಹ್ಮಣನನ್ನು ಕಂಡು ಮಾತಾಡಿಸಿದರು,

'ಎಲ್ಲಿಂದ ಬರುತ್ತಿರುವಿರಿ?'

'ಅಯೋಧ್ಯಾ ನಗರದಿಂದ'.

'ಅಲ್ಲಿ ಏನು ವಿಶೇಷ?'

'ಯಾಗ ನಡೆಯುತ್ತಿದೆ.'

ಬ್ರಾಹ್ಮಣರು ಯಾಗದ ನುಡಿ ಕೇಳಿ ಖುಷಿಗೊಂಡು ಅಯೋಧ್ಯಾ ನಗರಿಗೆ ಹೋದರು. ಮಾರನೇ ದಿನ ಋತುಪರ್ಣನು ಮುನಿಮುಖ್ಯರೊಂದಿಗೆ ಓಲಗದಲ್ಲಿರುವಾಗ ಅಲ್ಲಿಗೆ ಪ್ರವೇಶಿಸಿದರು. ಅವರಲ್ಲೊಬ್ಬನು ನಿಂತು ಕೈಯೆತ್ತಿ,

'ಹಿರಿಯರೇ, ಸಾಮಾಜಿಕರೇ, ಸುಜನರೇ ನೀವು ಕೇಳಿ' ಎಂದು ಅವರೆಲ್ಲರ ಗಮನ ಸೆಳೆದ. ತುಸು ತಡೆದು ಗಂಭೀರವಾಗಿ ಗಟ್ಟಿ ದನಿಯಲ್ಲಿ 'ಕಾಡಿನಲ್ಲಿ ಅಲೆದು ಆಯಾಸವಾಗಿ ಮಲಗಿದ ಧರ್ಮಪತ್ನಿಯ ಸೀರೆಯಲ್ಲಿ ಅರ್ಧ ತೆಗೆದುಕೊಂಡು ಅವಳನ್ನು ಅಲ್ಲಿಯೇ ಬಿಟ್ಟು ಹೋದವರು ಯಾರಾದರೂ ಇದ್ದಾರೆಯೆ? ಭೂಮಿಯನ್ನಾಳುವ ರಾಜಧರ್ಮಕ್ಕೆ ಇದು ಒಳ್ಳೆದಯಲ್ಲ.'

## ಮನವಳುಕಿ ನಸುನಗೆಯಿಂದ ನುಡಿದನು ಒಲಿದು ಬಾಹುಕನು

ಅದನ್ನು ಆಲಿಸಿದ ಬಾಹುಕನಿಗೆ ಮನಸ್ಸಿನಲ್ಲಿ ಅಳುಕುಂಟಾಯಿತು. ನಸುನಗೆಯಿಂದ ಪ್ರೀತಿ ಹೊಮ್ಮುವ ನುಡಿಯಲ್ಲಿ ಅವರನ್ನು ಕೇಳಿದ,

'ಭೂಸುರರೇ, ತಾವು ಎಲ್ಲಿಂದ ಬಂದಿರಿ? ಸತಿಯನ್ನು ಅಗಲಿ ಹೋದವನು ಕ್ಷುದ್ರ. ಪತಿಯಾಗಲು ಯೋಗ್ಯನಲ್ಲ. ಅದು ಹಾಗಿರಲಿ, ಋತುಪರ್ಣನ ಓಲಗದಲ್ಲಿ ಅತಿಶಯವಾದ ಮಾತನ್ನು ಕೇಳಿದೆವು. ಅಕಟಕಟಾ! ಅದು ಸತಿಗೆ ವಂಚನೆ ಅಲ್ಲ. ಪತಿಯಾದವನ ಕಳಂಕ ನಡೆ' ಎಂದು ಹೇಳಿದನು.

ಅದನ್ನು ಕೇಳಿದ ದೂತರಾದ ಬ್ರಾಹ್ಮಣರು ತಮ್ಮ ಮನಸ್ಸಿನಲ್ಲಿ – ಈ ಕುರೂಪಿ ಯಾರು? ಇವನೇ ನಿಷಧರಾಜ ನಳನೆ? ಸಭೆಯಲ್ಲಿ ಈತ ಈ ಮಾತನ್ನು ಏತಕ್ಕಾಗಿ ಆಡಿದ? ಏಕೋ ಸಂಶಯ ಕಾಡುತ್ತಿದೆ – ಎಂದು ಆಲೋಚನೆಗೆ ತೊಡಗಿದರು.

ಹಾಗೆ ಚಿಂತಿಸುತ್ತ ತಮ್ಮ ನಗರಕ್ಕೆ ಬಂದು ಭೀಮರಾಜನ ಮಗಳು ದಮಯಂತಿಯನ್ನು ಕಂಡು ಕೈಮುಗಿದು ನಡೆದ ಘಟನೆಯನ್ನು ತಿಳಿಸಿದರು.

'ತಾಯಿಯೇ ಆಲಿಸುವುದು. ನಾವು ಭೂಲೋಕದಲ್ಲೆಲ್ಲಾ ಸುತ್ತಾಡಿದರೂ ನಮಗೆ ನಳಮಹಾರಾಜನ ಸುಳಿವು ಸಿಕ್ಕಲಿಲ್ಲ. ಹಾಗೆ ಸುತ್ತುತ್ತಾ ಅಯೋಧ್ಯಾ ನಗರಿಯನ್ನು ತಲುಪಿದೆವು. ಅಲ್ಲಿ ರಾಜ ಋತುಪರ್ಣನ ಸೇವೆಯಲ್ಲಿ ಓರ್ವ ಕುರೂಪಿ ಇದ್ದಾನೆ. ಅವನು ಆ ರಾಜನಿಗೆ ಜೀವಸಖನಂತಿದ್ದಾನೆ. ಅವನ ಹೆಸರು ಬಾಹುಕ.'

'ಬ್ರಾಹ್ಮಣೋತ್ತಮರೇ, ಸಭೆಯಲ್ಲಿ ಆತನ ವಿಶೇಷವೇನು?'

'ಅಮ್ಮ, ಆ ನೃಪನ ಸಭೆಯಲ್ಲಿ ಬಾಹುಕನು ಅಶ್ವವಿದ್ಯೆಯಲ್ಲಿ ಮತ್ತು ಬಾಣಸಿಗತನದಲ್ಲಿ ನಿಪುಣನೆನಿಸಿಕೊಂಡಿದ್ದಾನೆ. ನಾವು ಅಚ್ಚುಕಟ್ಟಾಗಿ ನೀವು ಹೇಳಿದ ಮಾತನ್ನು ಆಸ್ಥಾನದಲ್ಲಿ ಹೇಳಿದೆವು. ಆಗ ಸುಮ್ಮನಿರಲಾಗದ ಬಾಹುಕನು ನಸುನಗುತ್ತ ಹೀಗೆ ಹೇಳಿದ.'

'ಹೇಳಿ, ದೂತಮಹಾಶಯರೆ, ಹೇಳಿ. ನಿಮ್ಮ ವರದಿಯ ಪ್ರತಿ ನುಡಿಯೂ ಮುಖ್ಯ' ಎಂದು ಕುತೂಹಲ ವ್ಯಕ್ತಪಡಿಸುತ್ತ, ಪ್ರೋತ್ಸಾಹದ ನುಡಿಯನ್ನು ದಮಯಂತಿ ಹೇಳಿದಳು. ಆಗ ಅವರು ಬಾಹುಕನು ಹೇಳಿದ ಮಾತನ್ನು ಹೀಗೆ ಪುನರುಚ್ಚರಿಸಿದರು :

'ಬ್ರಾಹ್ಮಣೋತ್ತಮನೇ ಕೇಳು. ಸತಿಗೆ ವಂಚನೆ ಮಾಡಿದ ಪತಿ ಮತಿಗೆಟ್ಟವನು ಸರಿ. ಅದರಿಂದ ಆ ಸತಿಗೆ ಏನೂ ತೊಂದರೆಯಿಲ್ಲ. ಪತಿಯಾದವನಿಗೇ ತೊಂದರೆ. ಪತಿವ್ರತ ಧರ್ಮಾಚರಣೆಯವಳು ಪತಿಯ ಗುಣದೋಷಗಳನ್ನು ಎಣಿಕೆಗೆ ತೆಗೆದುಕೊಳ್ಳುವಳೇ? ಸತ್ಯವೇ ಮೋಕ್ಷ ಕಾರಣ.

'ಪತಿಯ ತಪ್ಪೆಣಿಸುವ ಸತಿ ಪತಿವ್ರತೆಯೇ? ಧರಣಿಯನ್ನು ಪಾಲಿಸುವ ರಾಜನನ್ನು ನಿಂದಿಸುವವನು ಸೇವಕನೇ? ತಂದೆಯ ಮಾತನ್ನು ಕಡೆಗಣಿಸುವವನು ಮಗನೇ? ಗುರುವಿನ ಮಾತನ್ನು ಕೇಳದ ಪತಿತ ಪಾತಕಿ ಶಿಷ್ಯನೇ?'

ಬಾಹುಕನು ವಿಪ್ರರಿಗೆ ಹೇಳಿದ ನುಡಿ ಕೇಳಿ ತಲೆದೂಗಿದ ದಮಯಂತಿ ಮನಸ್ಸಿನಲ್ಲಿ ಆತನೇ ತನ್ನ ಪತಿ ಎಂದುಕೊಂಡಳು. ವಿಪ್ರರ ವರದಿಯ ಮಾತಿನಲ್ಲಿ ಸಂಶಯಕ್ಕೆ ಎಡೆಯಿಲ್ಲವೆಂದುಕೊಂಡು ಕಣ್ಣೀರು ಮಿಡಿದಳು.

ಬಾಹುಕನನ್ನು ಪರೀಕ್ಷಿಸುವ ಉಪಾಯವನ್ನು ಆಲೋಚಿಸಿದಳು. ತಂದೆಗೆ ವಿಷಯ ತಿಳಿಸಿ ಒಪ್ಪಿಗೆ ಪಡೆದು ಸುದೇವನನ್ನು ಕರೆಸಿದಳು. ಆ ದೂತ ವಿಪ್ರೋತ್ತಮನಿಗೆ ಎಲ್ಲ ವಿಚಾರವನ್ನು ತಿಳಿಸಿದಳು. ಪ್ರಯಾಣದ ವ್ಯವಸ್ಥೆಯನ್ನು ಮಾಡಿ ಅಯೋಧ್ಯೆಗೆ ಕಳುಹಿಸಿದಳು.

ಸುದೇವನು ಹಣೆಯಲ್ಲಿ ಪ್ರಕಾಶಿಸುವ ಗೋಪೀಚಂದನವನ್ನು ಧರಿಸಿ, ಹೊಸ

ಯಜ್ಞೋಪವೀತವನ್ನು ತೊಟ್ಟು, ಕಂಕುಳಲ್ಲಿ ಚೀಲವನ್ನು ಇರುಕಿಕೊಂಡನು. ಬೆರಳಿನಲ್ಲಿ ಜಪಮಾಲೆ ಹಿಡಿದು, ಭುಜದ ಮೇಲೆ ಉತ್ತರೀಯ ಹೊದ್ದು, ಸಡಿಲ ಕಚ್ಚೆಯುಟ್ಟನು. ಇಡೀ ಲೋಕವೇ ಆಶ್ಚರ್ಯ ಪಡುವ ರೂಪಿನಲ್ಲಿ ಬ್ರಹ್ಮನಂತೆ ಕಾಣುತ್ತ ಋತುಪರ್ಣನ ಓಲಗಕ್ಕೆ ಬಂದನು.

ಅವನನ್ನು ನೋಡಿದ ರಾಜ ಋತುಪರ್ಣನು ಕುತೂಹಲಗೊಂಡು ಕೇಳಿದನು,

'ತಾವು ಯಾರು? ಎಲ್ಲಿಂದ ಬಂದಿರಿ? ತಾವು ದೂರ ದೇಶದ ಹಿರಿಯರು. ಅಲ್ಲಿಯ ವಿಶೇಷವೇನು?'

'ಭೂರಮಣ ಕೇಳು. ಈ ಭೂಮಿಯಲ್ಲಿ ಸಂಚರಿಸುತ್ತ ಇಲ್ಲಿಗೆ ಬಂದೆವು. ವಿಶೇಷವೆಂದರೆ ವಿದರ್ಭಕ್ಕೆ ರಾಜ ಮಹಾರಾಜರು ತಮ್ಮ ಚತುರಂಗಸೇನೆಯೊಂದಿಗೆ ಆಗಮಿಸುತ್ತಿದ್ದಾರೆ! ಅನೇಕ ದೇಶದ ಭಿಕ್ಷುಕರು, ಬ್ರಾಹ್ಮಣೋತ್ತಮರು, ಮಂತ್ರಿಗಳು, ಜೋಯಿಸರು, ಹಾಡುಗಾರರು ಎಲ್ಲರೂ ಪ್ರಕಾಶಿಸುವ ತೇಜಸ್ಸಿನಲ್ಲಿ ಸಂತೋಷದಿಂದ ಬರುತ್ತಿದ್ದಾರೆ. ಅಲ್ಲಿ ದಮಯಂತಿಯ ಸ್ವಯಂವರ ಸಡಗರದಿಂದ ನೆರವೇರಲಿದೆಯಂತೆ. ಆ ವೈಭವವನ್ನು ವಾಸುದೇವನೇ ಬಲ್ಲ.'

'ವಿಪ್ರೋತ್ತಮನೇ, ದಮಯಂತಿಯ ಸ್ವಯಂವರವೇ?'

'ಹೌದು ಮಹಾರಾಜ. ರಾತ್ರಿ ಮಲಗಿದ್ದ ದಮಯಂತಿಯನ್ನು ನಳನೃಪ ಬಿಟ್ಟು ಹೋದನು. ನೀತಿಗೆಟ್ಟ ಅವಳಿಗೆ ತಂದೆ ಸ್ವಯಂವರ ಏರ್ಪಡಿಸಿದ್ದಾನೆ. ನೀವು ಈಗಲೇ ಪ್ರಯಾಣ ಮಾಡಬಹುದು' ಎಂದು ವರ್ಣಿಸಿ ಹೇಳಲು ಋತುಪರ್ಣನು ಹೆಣ್ಣಿನ ಮೋಹದಲ್ಲಿ ಬಾಹುಕನನ್ನು ಕರೆಸಿದನು. ರಥಕ್ಕೆ ಕುದುರೆಗಳನ್ನು ಹೂಡಿ ಸಿದ್ಧನಾಗಲು ಆಜ್ಞೆ ಮಾಡಿದನು. ಬಾಹುಕನು 'ಹಸಾದ' ಎಂದು ಹೇಳಿ ರಾಜನಿಗೆ ವಂದಿಸಿ ತನ್ನ ಮನೆಗೆ ಬಂದನು. ನಳನು ಹೊರಡಲು ತಯಾರಾಗಿ – ಜಗನ್ನಾಥ! ದಮಯಂತಿ ಮರಳಿ ವಿವಾಹವಾಗುತ್ತಿದ್ದಾಳೆಯೇ? ಈ ಸಂಗತಿ ಯಾರಿಂದ ಹೊಮ್ಮಿದೆಯೋ? ದಮಯಂತಿ ದ್ರೋಹಿಯಾದಳೇ? ಇದರಲ್ಲಿ ಏನೋ ಸಂಶಯ ಹೊಗೆಯಾಡುತ್ತಿದೆ – ಎಂದು ಹಲವು ಬಗೆಯಲ್ಲಿ ತನ್ನ ಸತಿಯ ಮರುಸ್ವಯಂವರ ಕುರಿತು ಚಿಂತಿಸುತ್ತ ಅರಮನೆಗೆ ಬಂದನು.

ಲಾಯದಲ್ಲಿಯ ಉತ್ತಮವಾದ ಕುದುರೆಯನ್ನು ಆಯ್ದು ರಥಕ್ಕೆ ಹೂಡಿದನು. ವಾಯುವೇಗದಲ್ಲಿ ಸಾಗಬಲ್ಲ ಆ ತೇರನ್ನು ತಂದು ರಾಜ ಋತುಪರ್ಣನ ಬಳಿ ನಿಲ್ಲಿಸಿದನು. ರಾಜ ರಥ ಏರಿದನು. ಅವನ ಜೊತೆ ಆನೆ, ಕುದುರೆ, ರಥ, ಕಾಲಾಳುಗಳು ಬಂದು ನೆರೆದವು. ಮಂಗಲ ವಾದ್ಯಗಳು ರಭಸದಲ್ಲಿ ಮೊಳಗಲು ರಾಜನು ವಿದರ್ಭಕ್ಕೆ ನಡೆದನು. ಹೊರಡುವಾಗ ರಾಜನು ಬಾಹುಕನಿಗೆ,

## ತನ್ನಿನಿಯಳಿಗೆ ವಿಧಿ ಬರೆದನೇ ಶಾಸನವ ಮೀರುವರಾರೆನುತ ಮರುಗಿದನು ನಳನೃಪತಿ

'ಎಲೈ ಬಾಹುಕನೇ, ನನ್ನ ಮನಸ್ಸು ಮಾನಿನಿ ದಮಯಂತಿಯನ್ನು ನೋಡಲು ಕಾತುರಗೊಂಡಿದೆ. ಇದೇ ದಿನ ವಿದರ್ಭ ನಗರವನ್ನು ಸೇರುವಂತೆ ರಥವನ್ನು ನಡೆಸು' ಎಂದು ಹೇಳಿದನು. ಅದನ್ನು ಕೇಳಿ ದುಗುಡ ತುಂಬಿದ ಮನದ ತೇರಲ್ಲಿ ಓಲಾಡುತ್ತ ನಳನು ತನ್ನೊಳಗೆ ತಾನೇ ನಕ್ಕನು. ತನ್ನ ಪ್ರಿಯ ಪತ್ನಿಗೆ ಈ ರೀತಿ ವಿಧಿ ಶಾಸನ ಬರೆದನೇ? ಇದನ್ನು ಮೀರುವವರಾರು ಎನ್ನುತ್ತ ತಳಮಳಗೊಂಡನು.

ಅವನು ತಾನು ಕೈಯಲ್ಲಿ ಹಿಡಿದ ಕಡಿವಾಣವನ್ನು ಸಡಿಲ ಬಿಡಲು ರಥದ ಕುದುರೆಗಳು ಅಡಿಗಡಿಗೆ ಚಿಮ್ಮುತ್ತ ನೆಗೆದುವು. ರಥವು ವಾಯುವೇಗದಲ್ಲಿ ಸಾಗಿತು. ಹೀಗೆ ರಭಸದಲ್ಲಿ ಹೋಗುವಾಗ ರಾಜನು ಹೊದೆದ ಹಚ್ಚಡವು ಹಾರಿ ನೆಲಕ್ಕೆ ಬಿದ್ದಿತು. ತಕ್ಷಣ ರಾಜನು ಸಾರಥಿಯನ್ನುದ್ದೇಶಿಸಿ ನುಡಿದನು,

'ವಸ್ತ್ರ ಬಿದ್ದು ಹೋಯಿತು. ಏನು ಮಾಡುವುದು?'

'ಪ್ರಭುವೇ, ಸಂಭ್ರಮದ ಈ ಓಟದಲ್ಲಿ ನಿಮ್ಮ ವಸ್ತ್ರ ತುಂಬ ಹಿಂದುಳಿದಿದೆ. ನಮ್ಮ ವಾಯುಗತಿಯಲ್ಲಿ ಹಲವು ಯೋಜನ ದೂರ ಬಂದಿದ್ದೇವೆ. ಹಚ್ಚಡದ ಮಾತೇಕೆ?' ಎಂದು ಬಾಹುಕ ಹೇಳಲು, ಅವನ ಸಾರಥ್ಯವನ್ನು ಮೆಚ್ಚಿ ರಾಜನು,

'ಸಾರಥಿ ಎಂದು ಪ್ರಖ್ಯಾತನಾದವನು ನೀನು' ಎಂದು ಹೇಳಿ ಅವನನ್ನು ಕೊಂಡಾಡಿದನು. ಹಾಗೆ ಸಾಗಿಬರುತ್ತಿರಲು ಕಾಡಿನಲ್ಲಿ ಒಂದು ತಾರೆಯ ಮರವನ್ನು ನೋಡುತ್ತ ಬಾಹುಕನಿಗೆ ಪ್ರಶ್ನೆ ಹಾಕಿದನು.

## ತಾರೆಯ ಮರನನದರೊಳು ಸಂದ ಫಲಪರ್ಣಂಗಳೆಣಿಸದೆ ಸೂತ ಪೇಳು

'ಎಲೆ ಸಾರಥಿಯೇ, ಆ ಮರದಲ್ಲಿ ಹಣ್ಣು ಮತ್ತು ಎಲೆಗಳನ್ನು ಎಷ್ಟಿವೆಯೆಂದು ಎಣಿಸದೆ ಹೇಳು ನೋಡೋಣ.'

'ಮಹಾಪ್ರಭುವೇ, ನನಗೆ ಇಂದು ಬುದ್ಧಿ ಮಂಕಾದಂತಿದೆ. ತಪ್ಪಾಗಿ ಭಾವಿಸದೆ ನೀವೇ ಅದನ್ನು ತಿಳಿಸಿ' ಎಂದು ನಳನು ಬಿನ್ನವಿಸಿದನು. ರಾಜನು ಅವನಿಗೆ ಸರಿಯಾದ ಲೆಕ್ಕವನ್ನು ಹೇಳಿದನು.

ಅದನ್ನು ಪರೀಕ್ಷಿಸಲು ಬಾಹುಕನು ರಥದಿಂದ ಇಳಿದು ಬಂದನು. ಮರದ ಬಳಿ

ನಿಂತು ಎಲ್ಲ ಕೊಂಬೆಗಳಲ್ಲಿರುವ ಫಲ ಮತ್ತು ಎಲೆಗಳನ್ನು ಪದ್ಮಸಂಖ್ಯೆಯಲ್ಲಿ ಎಣಿಸಿದನು. ಹೀಗೆ ಒಲಿದ ಲೆಕ್ಕವನ್ನು ಕಂಡು ನಳನೃಪನು ಮನಸ್ಸಿನಲ್ಲಿ ಪುಷ್ಕರನನ್ನು ತಾನು ಗೆಲ್ಲುವ ಸೂಕ್ತ ಕಾಲ ಒದಗಿ ಬಂತು ಎಂದುಕೊಂಡು ಹಿಂತಿರುಗಿದನು. ಆಗ ಕಾಲ ಪುರುಷನು ಎದುರಾಗಿ,

## ತೊಲಗಿದೆನು ಇಂದಿನಲಿ ಶುಭಮಂಗಳಕರವು ನಿನಗಪ್ಪುದು

'ಎಲೆ ನೃಪಾಲಕ, ನಿನ್ನ ಸತ್ಯವನ್ನು ಪರೀಕ್ಷಿಸಬೇಕೆಂದು ಅತಿಯಾಗಿ ಕಾಡಿದೆ. ದುಃಖಕ್ಕೆ ದೂಡಿದೆ. ಇನ್ನು ನಿನ್ನ ಮನದ ನೋವನ್ನು ಬಿಡು. ಇಂದು ನಿನ್ನನ್ನು ಬಿಟ್ಟು ತೊಲಗಿ ಹೋಗುತ್ತೇನೆ. ನಿನಗೆ ಶುಭಮಂಗಳವಾಗಲಿ' ಎಂದು ಹೇಳಿದನು. ಆಗ ನಳನೃಪತಿಯು ಕೋಪಗೊಂಡರೂ ಅವನಿಗೆ ಶಾಪಕೊಡದೆ, ಕ್ಷಮಿಸಿದನು.

ಧರ್ಮರಾಜನೇ ಕೇಳು. ಲೋಕಕ್ಕೆ ದೀನಜನ ಬಾಂಧವನಾದ ನಳನೃಪನು ಕಲಿಪುರುಷನನ್ನು ಅತ್ತ ಕಳುಹಿಸಿ ಬಂದು ರಥವೇರಿದನು. ಋತುಪರ್ಣ ರಾಜನಿಗೆ ತನ್ನ ಅಶ್ವ ವಿದ್ಯೆಯನ್ನು ಕಲಿಸಿ, ಅವನಿಂದ ವೃಕ್ಷ ವಿದ್ಯೆಯನ್ನು ಕೆಲವೇ ನಿಮಿಷದಲ್ಲಿ ತಿಳಿದುಕೊಂಡನು.

ಕೈಯಲ್ಲಿ ಕಡಿವಾಣವನ್ನು ಹಿಡಿದು, ರಾಜನಿಗೆ ಎಚ್ಚರಿಸಿ ಕುದುರೆಗಳಿಗೆ ಹೂಂಕರಿಸಿದನು. ಅವು ಮುಂದಕ್ಕೆ ದೃಷ್ಟಿ ಹರಿಸಿ ಲವಲವಿಕೆಯಿಂದ ವೇಗದಲ್ಲಿ ಓಡಿದವು. ಅವುಗಳ ಆವೇಶದ ರಭಸವನ್ನು ಏನೆಂದು ಹೇಳುವುದು? ನೆರೆದ ಜನ ಅಲ್ಲಲ್ಲಿ ನಿಂತು ಬೆಕ್ಕಸ ಬೆರಗಾಗಿ ನೋಡಿದರು.

ಕುದುರೆಯ ಹೇಷಾರವ, ರಥದ ಚಕ್ರಗಳು ಹೊರಳುವ ಚೀತ್ಕಾರ, ಸಾರಥಿಯ ಸಂಭ್ರಮಾವೇಶ, ರಥದ ಅಚ್ಚುಗಳ ಘೀಂಕಾರ ನಾದದಲ್ಲಿ ಭರದಿ ಕೆಂದೂಳು ಹೊಮ್ಮಿಸುತ್ತ, ಋತುಪರ್ಣ ರಾಜನು ಬಂದನು. ಅದನ್ನು ವಿದರ್ಭ ನಗರದ ಜನರು ಗುಂಪುಗೂಡಿ ಕುತೂಹಲದಿಂದ ನೋಡಿದರು. ಆ ವಿಷಯವನ್ನು ಪರಿಚಾರಕರು ಭೀಮನೃಪನಿಗೆ ತಿಳಿಸಿದರು.

ಋತುಪರ್ಣ ಬಂದುದನ್ನು ಕೇಳಿ ರಾಜ ಹರ್ಷಗೊಂಡನು. ಅವನನ್ನು ಸ್ವಾಗತಿಸಲು ಸಚಿವರನ್ನು ಕಳುಹಿಸಿದನು. ಅವರು ರಾಜ ಋತುಪರ್ಣನನ್ನು ಅರಮನೆಗೆ ಕರೆದುಕೊಂಡು ಬಂದರು. ಭೀಮನೃಪನು ಹರ್ಷದಿಂದ ಬರಮಾಡಿಕೊಂಡನು. ಜನಜಂಗುಳಿಯನ್ನು ಚದುರಿಸಿ ಅನಂತರ ಅತಿಥಿಗಳು ಉಳಿದುಕೊಳ್ಳಲು ಬೇರೆ ಅರಮನೆಯಲ್ಲಿ ವ್ಯವಸ್ಥೆ ಮಾಡಿದನು. ಉಚಿತವಾದ ಉಡುಗೊರೆಗಳನ್ನು ನೀಡಿ ಅಯೋಧ್ಯಾಪತಿಯನ್ನು ಸತ್ಕರಿಸಿದನು.

## ಎನಗಿಂದು ಶೋಕಜ್ವಾಲೆ ಪರಿಹಾರವಾಯ್ತು ಮಂಗಳದೇಳಿಗೆಯು ಪಸರಿಸಿತು

ಈ ವಾರ್ತೆಯನ್ನು ಕೇಳಿ ದಮಯಂತಿಯು ಮನಸ್ಸಿನಲ್ಲಿ ಹರ್ಷಗೊಂಡಳು. ತನ್ನ ಆಪ್ತ ಗೆಳತಿಯೊಡನೆ,

'ಬಾಲೆ ಕೇಳು. ಮಹಾಶಿವನ ಕೃಪೆಯಿಂದ ತನಗಿಂದು ಪುಣ್ಯ ಲಭಿಸಿದೆ. ಇಂದಿಗೆ ನನ್ನ ಶೋಕಜ್ವಾಲೆ ಪರಿಹಾರವಾಯ್ತು. ಮಂಗಳದ ಏಳಿಗೆಯುಂಟಾಯಿತು. ಎಲ್ಲವೂ ಶುಭವಾಗುತ್ತಿದೆ' ಎಂದು ತನ್ನ ಮನದ ಒಳಭಾವವನ್ನು ಪ್ರಕಟಪಡಿಸಿದಳು.

## ಭಿನ್ನವಿಲ್ಲದೆ ಕೊಂಡ ನಾಚಿಕೆಗಿನ್ನು ಹದನೇನು

ಋತುಪರ್ಣನ ಮನಸ್ಸು ದಣಿದು ವಿಷಾದಕ್ಕೊಳಗಾಯಿತು. 'ಬ್ರಾಹ್ಮಣನ ಮಾತಿನ ಜಾಣ್ಮೆಗೆ ಮರುಳಾಗಿ ಇಲ್ಲಿಗೆ ಬಂದು ಮೂರ್ಖನಾದೆನಲ್ಲ! ಕರೆ ಇಲ್ಲದೆ ಬಂದು ಎಂಥ ನಾಚಿಕೆಗೀಡಾದೆ! ಇದೆಂಥ ಪಾಡಾಯಿತು!' ಎಂದು ಗುಣಸಂಪನ್ನನಾದ ಅಯೋಧ್ಯಾಪತಿ ಮನದಲ್ಲಿ ನೊಂದು ಚಿಂತೆಗೀಡಾದನು.

# ಬಾಹುಕನ ಕಣ್ಣ ಕದಿರಿನಲ್ಲಿ ನಳನೃಪನ ತೇಜ ಕಂಡ ದಮಯಂತಿ

ವಿದರ್ಭ ಭೂಪಾಲನು ಓಲಗವನ್ನು ಏರ್ಪಡಿಸಿದನು. ಮಂತ್ರಿ, ಬಂಧು ಬಾಂಧವರೆಲ್ಲರನ್ನೂ ಕರೆಸಿದನು. ಆ ಸಭೆಗೆ ಋತುಪರ್ಣನು ಬಾಹುಕನೊಂದಿಗೆ ಬಂದು ರತ್ನ ಪೀಠದಲ್ಲಿ ಕುಳಿತನು. ರಾಜನ ಆಸ್ಥಾನವು ತರುಣಿಯರ ಸಂಗೀತ ನೃತ್ಯ ಮೇಳದಿಂದ ರಂಜಿಸಿತು.

ಆಸ್ಥಾನದಲ್ಲಿ ನಾರಿಯರ ಮರೆಯಲ್ಲಿ ಕುಳಿತ ದಮಯಂತಿಯು ಕುಬ್ಜಾವತಾರದ ಸಾರಥಿಯನ್ನು ಓರೆಗಣ್ಣಿನಿಂದ ನೋಡಿದಳು. ತನ್ನ ಮನಸ್ಸಿನಲ್ಲಿ ಇವನು ಯಾರು? ಇವನಲ್ಲಿ ನಳನೃಪನನ್ನು ಹೋಲುವ ಚಿಹ್ನೆಗಳಿಲ್ಲ. ರೂಪು ವಿಕಾರವಾಗಿದೆ ಎಂದು ಚಿಂತಿಸಿದಳು.

ಅವಳು ಸಾರಥಿಯ ಮುಖದ ಕಾಂತಿಯನ್ನು, ಕಳೆಗುಂದಿದ ದೇಹವನ್ನು, ಉದುರಿದ ಕೂದಲುಗಳ ಹರಕು ಗಡ್ಡವನ್ನು ಮತ್ತೆ ಮತ್ತೆ ನೋಡಿ ಪರೀಕ್ಷಿಸಿದಳು. ನಳನ ಲಕ್ಷಣದ ಒಂದು ಎಳೆಯೂ ಗೋಚರಿಸಲಿಲ್ಲ. ಆಗ ಅವಳು ನಳನೃಪತಿಯು – ನನ್ನನ್ನು ಪರೀಕ್ಷಿಸಲು ಈ ರೂಪು ತಾಳಿರುವನೇ? ಶಿವಶಿವಾ! ಆ ಹರಿಯೇ ಇದರ ಮರ್ಮಬಲ್ಲ! ಎಂದು ಉಕ್ಕಿಬಂದ ದುಃಖದಲ್ಲಿ ಮಿಂದಳು.

ಓಲಗವು ಕೊನೆಗೊಂಡಿತು. ಅಂತಃಪುರಕ್ಕೆ ಬಂದ ದಮಯಂತಿಯು ನಳನ ಸುಳುಹು ದೊರಕಿಸಿಕೊಳ್ಳುವ ಬಗ್ಗೆ ಆಲೋಚಿಸಿದಳು. ಕೆಲವು ಸ್ತ್ರೀಯರನ್ನು ಪಾಕಶಾಲೆಗೆ ಕಳುಹಿಸಿದಳು. ಅವರು ಅಲ್ಲಿ ಬಾಹುಕನ ಪಾಕ ಪರಿಣತ ಕೈ ಚಳಕವನ್ನು ಕಂಡು,

ಅವನನ್ನು ಹೊಗಳುತ್ತ ಬಂದರು. ದಮಯಂತಿಯನ್ನು ಕಂಡು ಹೀಗೆ ಅರಿಕೆ ಮಾಡಿಕೊಂಡರು :

## ಲೋಕದ ಸ್ತ್ರೀಯರೊಳಗಿನ್ನಿಲ್ಲ ರಚಿಸುವ ಪಾಕದಲಿ

'ತಾಯೆ, ಬಾಹುಕನ ಅಡಿಗೆ ಮಾಡುವಿಕೆಯ, ಸಾಮಗ್ರಿ ಸಾಧನಗಳ ಬಳಕೆಯ ಕೌಶಲವನ್ನು ನಾವು ಏನೆಂದು ವರ್ಣಿಸುವುದು? ಅವನ ರೀತಿಯ ಶಾಕಪಾಕ ಪರಿಣತರು ಈ ಲೋಕದ ಸ್ತ್ರೀಯರಲ್ಲಿ ಯಾರೂ ಇಲ್ಲ! ಅದೊಂದು ಗಾರುಡಿ! ಅಷ್ಟು ಸುಲಭವಾಗಿ ತಿಳಿಯಲಾಗದು! ನಾಜೂಕಾಗಿ ನೋಡಿದರೆ ಎಲ್ಲ ರಸಾಯನವು (ಸಿಹಿ, ಖಾರ ಮೊದಲಾದ ಆರು ರಸಗಳ ಮಿಶ್ರಣ) ಪರಿಪಕ್ವವಾಗಿದೆ! ಅದನ್ನು ವರ್ಣಿಸಲು ನಮಗೆ ಸಾಧ್ಯವಿಲ್ಲ!'

ದಾದಿಯರು ಬಾಹುಕನ ಗುಣಗಳೊಂದೊಂದನ್ನೂ ಪರೀಕ್ಷಿಸಿ ನೋಡಿ ಆ ವಿವರ ಗಳನ್ನು ದಮಯಂತಿಗೆ ತಿಳಿಸಿದರು. ಆಗ ಅವಳು – ನಳನ ಗುಣಗಳು ಬಾಹುಕನಲ್ಲಿವೆ. ಇದರಲ್ಲಿ ಏನೋ ರಹಸ್ಯ ಅಡಗಿದೆ. ಇದರ ಗುಟ್ಟನ್ನು ಕಂಡುಹಿಡಿಯುವೆ ಎಂದು ನಿಶ್ಚಯಿಸಿದಳು.

ವಿನೋದದಿಂದ ಸದಾ ನಲಿದಾಡುವ ತನ್ನ ಇಬ್ಬರು ಮಕ್ಕಳನ್ನು ಬಳಿಗೆ ಕರೆದಳು. ಅವರಿಗೆ ನೀರೆರೆದು, ಚಿನ್ನದ ಜರಿಯ ಉತ್ತಮ ಬಟ್ಟೆಗಳನ್ನು ಉಡಿಸಿ, ಆಭರಣಗಳನ್ನು ತೊಡಿಸಿದಳು. ಆ ಮಕ್ಕಳನ್ನು ಬಾಣಸಿಗನ ಅಡಿಗೆ ಮನೆಯ ಬಾಗಿಲ ಮುಂದೆ ಬಿಡಲು ದಾಸಿಯರಿಗೆ ಸೂಚಿಸಿದಳು. ಆ ಮಕ್ಕಳು ಅಲ್ಲಿ ಸುಳಿದಾಡುವುದನ್ನು ನೋಡಿ ನಳನೃಪನು ಹರುಷಗೊಂಡನು. ಮಕ್ಕಳನ್ನು ಎತ್ತಿ ತೊಡೆಯೊಳಗಿರಿಸಿಕೊಂಡು ಮುದ್ದಾಡಿದನು. ಅವುಗಳ ನೆತ್ತಿಯನ್ನು ಮೂಸಿ ನೋಡುತ್ತ ಸುಖದಲ್ಲಿ ನಲಿದಾಡಿದನು.

ಬಾಹುಕ ಆನಂದ ದುಃಖಗಳ ಸಮ್ಮಿಳನದ ಕಣ್ಣೀರ ಧಾರೆಯಲ್ಲಿ ತದೇಕ ಚಿತ್ತದಿಂದ ಮಕ್ಕಳನ್ನೇ ನೋಡುತ್ತಿದ್ದನು. ಆ ಕಣ್ಣುಗಳು ಪರಸ್ಪರ ನೋಡಿ ಉಲ್ಲಾಸದಿಂದಿರುವುದನ್ನು – ದಮಯಂತಿ ಮರೆಯಲ್ಲಿ ನಿಂತು, ಜಾಲಂಧ್ರ(ಕಿಟಕಿ)ದಿಂದ ನೋಡಿ ಪುಳಕಿತಳಾದಳು. ಸೂಕ್ಷ್ಮವಾಗಿ ನೋಡುತ್ತ ಬಾಹುಕನ ಕಣ್ಣಕದಿರಿನಲ್ಲಿ ನಳನೃಪನ ತೇಜ ಕಂಡಳು! ಈತನೇ ನಳನೃಪನೆಂದು ತೀರ್ಮಾನಿಸಿ ಅತಿಶಯ ಪ್ರೇಮಾನಂದದಲ್ಲಿ ತನ್ನ ತಾಯಿಯ ಅರಮನೆಗೆ ಬಂದು ಹೇಳಿದಳು,

## ಇವನ ನಿಜಾಯತವ ತಾ ಬಲ್ಲೆ ಕರೆಸೆಂದಳು ಸರೋಜಮುಖಿ

'ತಾಯೇ, ಈತನೇ ನಿಷಧ ರಾಜ. ಇದರಲ್ಲಿ ಸಂಶಯವಿಲ್ಲ. ಈತ ಸೂತ ಅಲ್ಲ. ಯಾವುದೋ ಯುಕ್ತಿಯಿಂದ ಕುರೂಪಿ ವೇಷದಲ್ಲಿ ಬಂದಿದ್ದಾನೆ. ರಾಜರಲ್ಲಿಯೇ ಶ್ರೇಷ್ಠನಾದ

ನಳನೃಪನು ಮಾಯೆಯನ್ನು ತೋರಿದ್ದಾನೆ. ಈತನ ಹಿರಿಮೆ, ಮಹಿಮೆ ನನಗೆ ಗೊತ್ತು. ಈತನನ್ನು ಇಲ್ಲಿಗೆ ಕರೆಸು.'

ಮಗಳ ಮಾತಿನಂತೆ ತಾಯಿಯು ಭೀಮನೃಪನ ಅನುಮತಿ ಪಡೆದು ಬಾಹುಕನನ್ನು ಕರೆಸಿದಳು. ಕರೆಗೆ ಮನ್ನಿಸಿ ಬಂದ ನಳನು ರಾಜ ಮಂದಿರದಲ್ಲಿ ಕುಳಿತನು. ಅಲ್ಲಿ ಮಾಸಿದ ಸೀರೆಯುಟ್ಟು, ಚೊಕ್ಕಟತನವಿಲ್ಲದ ಚೆಲುವಿನಲ್ಲಿ ನಿಂತಿದ್ದ ದಮಯಂತಿಯನ್ನು ನೋಡಿ ಲಜ್ಜೆಗೊಂಡು ತಲೆ ತಗ್ಗಿಸಿದನು! ಆಗ ಆ ಸತಿಯು,

'ಚಂದ್ರವಂಶದ ತಿಲಕಪ್ರಾಯರೇ, ನೀವು ಪೃಥ್ವೀ ವಲ್ಲಭರು, ಪುಣ್ಯೋದಯರು, ಸದಾ ಲೇಸನ್ನು ಆಡುವವರು, ವಿಮಲಗುಣ ಚಾರಿತ್ರರು, ಸತ್ಯಶೀಲರು. ನಿಮ್ಮ ಮೇಲೆ ದುಷ್ಟ ಪುಷ್ಕರ ಕೋಪಗೊಂಡನೇ? ಅವನನ್ನು ಎದುರಿಸಲಾಗದ ವಿಕ್ರಮರಾದಿರೇ? ಅದನ್ನು ಬಿಡಿ. ಅಮಿತ ಭುಜಬಲರಾದ ನೀವು ನನ್ನನ್ನು ಕಾಪಾಡಿ' ಎಂದು ಹೇಳಲು ಅವನು ಕತ್ತೆತ್ತಿದನು. ಆ ಕಣ್ಣಿನಲ್ಲಿ ತನ್ನ ದೃಷ್ಟಿನೆಟ್ಟ ಅವಳು – ಸೌಮ್ಯವೇ ಮೂರ್ತಿವೆತ್ತಂತೆ ಹತ್ತಿರ ಸಾಗಿ,

'ಸಾರ್ವಭೌಮರಾದ ತಮಗೆ ಪೂರ್ವಜನ್ಮದ ಕರ್ಮಫಲದಿಂದ ಋತುಪರ್ಣನಲ್ಲಿ ಸೇವೆ ಮಾಡುವಂತಾಯಿತು. ಪುಣ್ಯಕ್ಷಯದ ಫಲ ಇದಾಗಿರುವಾಗ ಚಿಂತಿಸಿ ಫಲವೇನು? ಗುಣ ಸಂಪನ್ನನೇ ಸತಿಯಾದ ನನ್ನನ್ನು ರಕ್ಷಿಸು' ಎಂದು ಹೇಳಿ ಅವನ ಪಾದಕ್ಕೆ ಎರಗಿದಳು. ನಳನು ಪತ್ನಿಯ ತಲೆಯೆತ್ತಿ ನೋಡುತ್ತ ಕಣ್ಣೀರು ಒರೆಸುತ್ತ,

'ಮಾನಿನಿಯೇ, ಬರಿದೆ ಚಿಂತಿಸುವೆ ಏಕೆ? ಮನೋವ್ಯಥೆಯನ್ನು ಬಿಡು. ನೀನು ಈ ಲೋಕದ ಸ್ತ್ರೀಯರಿಗೆಲ್ಲ ಗುರುವಾದವಳೆಂದು ನಿನಗೆ ತಿಳಿಯದೇ? ಹಾಗಾಗಿ ನನ್ನನ್ನು ಬಯಸಬೇಡ ಹೋಗು. ನಾನು ವಿನಯಹೀನ. ತಪ್ಪಿ ನಡೆದ ನಿರ್ದಯ. ಒಬ್ಬಳನ್ನೇ ಕಾಡಿನಲ್ಲಿ ಬಿಟ್ಟುಹೋದ ದುರಾತ್ಮ.

'ಎಲೆ ಹುಚ್ಚಿ, ನನ್ನನ್ನು ನೆನೆಯುವರೇ? ನಿನಗೆ ಇಂದು ನಡೆಯುವ ಸ್ವಯಂವರದಲ್ಲಿ ನಿನ್ನ ಮನಸ್ಸಿಗೆ ಬಂದವನನ್ನು ವರಿಸು' ಎಂದು ಹೇಳಿದನು.

ಆ ಮಾತು ದಮಯಂತಿಗೆ ಈಟಿಯ ಮೊನೆಯಿಂದ ಕಿವಿಗಳಿಗೆ ಚುಚ್ಚಿದಂತಾಯಿತು. ಕಣ್ಣು ಹನಿಗೂಡಿತು. 'ಹರಹರ! ಶಿವಾ!!' ಎನ್ನುತ್ತ ಹೀಗೆ ನುಡಿದಳು,

'ನನ್ನ ಮನಸ್ಸಿನಲ್ಲಿ ಪುನಃ ಸ್ವಯಂವರದ ಯೋಚನೆ ಇದೆಯೆಂದು ತಿಳಿದಿರಾ? ನೀವು ಇಲ್ಲಿಗೆ ಬರಬೇಕೆಂದು ಈ ವಾರ್ತೆಯನ್ನು ಕಳಿಸಿದೆ. ಅದು ಸಫಲವಾಯಿತು. ನೀವು ಬಂದಿರಿ.

'ನಿಮ್ಮ ರೂಪು ನನ್ನ ಮನಸ್ಸಿನಲ್ಲಿ ಸೊಗಸುಗೊಂಡಿದೆ. ಅದನ್ನೇ ನಾನು ಹಿತವಾಗಿ ನಂಬಿರುವೆ. ಸಕಲ ಧರ್ಮವಿಚಾರ ಅರಿತ ತಮಗೆ ಈ ವಿಕಾರ ರೂಪಿನ ಸೋಗು ಏತಕ್ಕೆ? ನಿಮ್ಮದು ವಿಷ್ಣುವಿನ ಪ್ರತಿರೂಪ. ವ್ಯರ್ಥವಾದ ಮಾತುಗಳೇಕೆ? ಸುಮ್ಮನಿರಿ' ಎಂದು ಹೇಳಿ ಅವನ ವಿಕೃತ ರೂಪ ನೋಡುತ್ತ ಕಣ್ಣೀರಧಾರೆ ಹರಿಸುತ್ತ, ಮಾತು ಮುಂದುವರೆಸಿ,

## ನಡೆಯುತೆಡಹಿದ ಪಟ್ಟದಾನೆಯ ಪಿಡಿದು ಕೊಲ್ಲುವರುಂಟೆ

'ನಳನೃಪತಿಯೇ, ನಡೆಯುವಾಗ ಎಡವಿದ ಪಟ್ಟದಾನೆಯನ್ನು ಹಿಡಿದು ಕೊಲ್ಲುವರೇ? ನಿಮ್ಮನ್ನು ನಂಬಿದ ಮಡದಿ ನಾನು. ನನ್ನೊಡನೆ ಬಿರುನುಡಿಯನ್ನು ಏಕಾಡುವಿರಿ? ಕಾಡಿನಲ್ಲಿ ತುಂಬಾ ನೊಂದರೂ ಈ ದೇಹವನ್ನು ಬಿಡದೆ ಕಾಪಾಡಿಕೊಂಡು ಬಂದೆ. ಇನ್ನು ಈ ಪ್ರಾಣದ ಗೊಡವೆ ಏಕೆ?'

ಎಂದು ನಿರಾಶಳಾಗಿ ಹೇಳಿ, ತಾನು ಅವನನ್ನು ಹುಡುಕಲು ನಡೆಸಿದ ನಿಜ ಪ್ರಯತ್ನವನ್ನು ಹೀಗೆ ತಿಳಿಸಿದಳು.

'ರಾಯನೇ, ಕಡುನೊಂದಿರುವ ಸತಿಯೊಡನೆ ನೀವು ಈ ರೀತಿ ಮಾತನಾಡುವುದು ನ್ಯಾಯವೇ? ನಿಮ್ಮನ್ನು ಹುಡುಕಲು ಸೇವಕರನ್ನು ದಿಕ್ಕು ದಿಕ್ಕಿಗೆ ಕಳುಹಿಸಿದೆ ನಿಮ್ಮ ಮಾಯಾ ರೂಪಿನಿಂದ ಅವರು ಪತ್ತೆಹಚ್ಚಲಾಗದೆ ಬಳಲಿದರು. ಅಯೋಧ್ಯೆಯ ರಾಜನಲ್ಲಿ ನೂತನ ಸಾರಥಿಯಿರುವನೆಂದು ತಿಳಿದಾಗ – ನೀವೇ ಇರಬಹುದೆಂದು ಆಂತರ್ಯ ಮಿಡಿಯಿತು. ಕೂಡಲೇ ಬ್ರಾಹ್ಮಣ ಸುದೇವನನ್ನು ನಿಮ್ಮಲ್ಲಿಗೆ ಕಳುಹಿಸಿದೆ. ಅವನು ಕೇಳಿದ ಪ್ರಶ್ನೆಗೆ ನೀವು ಸರಿಯಾದ ಉತ್ತರ ನೀಡಿದಿರಿ. ಇನ್ನೂ ಸಂಶಯ ಉಳಿಯಲು ಅದರ ಪರಿಹಾರಕ್ಕಾಗಿ ಸ್ವಯಂವರದ ನೆಪ ಒಡ್ಡಿ ನೀವು ಬರುವಂತೆ ಮಾಡಿದೆ. ಇದರಲ್ಲಿ ತಪ್ಪೇನಿದೆ?' ಎಂದು ಇರುವ ವಿಷಯವನ್ನು ತಿಳಿಸಿ,

'ನಳನೃಪನೇ, ಮದುವೆಯಾಗಿ ಬಂದು ಯೌವನವನ್ನು ನಿಮಗೆ ಒಪ್ಪಿಸಿದೆ. ನನ್ನ ತನು, ಮನ, ವಾಕ್ಕು, ಕಾಯ, ಕರ್ಮಗಳಲ್ಲಿ ನಿಮಗೆ ಎರಡು ಬಗೆದವಳಲ್ಲ. ನೀವೇ ನನಗೆ ಗತಿ ಎಂದು ನಾನಿರುವುದು ನಿಮಗೆ ತಿಳಿಯದೇ?'

'ದೊರೆಯೇ, ನನ್ನನ್ನು ರಕ್ಷಿಸು. ಕೈ ಹಿಡಿದು ಸಲಹು. ನಾನು ಹೇಳುತ್ತಿರುವ ಈ ನುಡಿಗೆ ಯಮ, ವರುಣ, ವಾಯು, ಇಂದ್ರ ಹಾಗೂ ಶ್ರೀಹರಿಯೇ ಸಾಕ್ಷಿ' ಎಂದು ತಲೆಬಾಗಿ ವಂದಿಸಿದಳು.

## ಮೇಘದಲಿ ನುಡಿದನು ವಾಯು ನಳನೃಪನೊಡನೆ ಸತ್ಯವನು

ಆಗ ಮೇಘಮಂಡಲದಿಂದ ವಾಯುವು ನಳನೃಪನಿಗೆ ಸತ್ಯವನ್ನು ಹೀಗೆ ಹೇಳಿದನು :

'ಚತುರ ರಾಜನೇ ಕೇಳು. ದಮಯಂತಿ ಘನ ಗೌರವ ಸ್ತ್ರೀ. ಜಗತ್ತಿನಲ್ಲಿ ಪವಿತ್ರಳು. ನೀನು ಸಂಶಯವನ್ನು ಬಿಡು. ಸತಿಯನ್ನು ರಕ್ಷಿಸು' ನಳಮಹಾರಾಜನು ವಾಯುವಿನ ಮಾತಿಗೆ ಸಮ್ಮತಿಸಿ,

'ನಾನು ಕಲಿಪುರುಷನ ಕಪಟದಿಂದ ತುಂಬ ನೊಂದೆನು. ನಿಮ್ಮ ದರ್ಶನದಿಂದ ನನ್ನ ಬವಣೆ ದೂರವಾಯಿತು. ನಾನು ಕೃತಾರ್ಥನಾದೆ' ಎಂದು ವಿಜ್ಞಾಪಿಸಿಕೊಂಡನು.

ಇನ್ನು ಯಾವುದೇ ಅಳುಕು, ಭಯವಿಲ್ಲ. ಎಲ್ಲ ಒಳಿತಾಯಿತು ಎಂದುಕೊಂಡು ಮನಸ್ಸಿನಲ್ಲಿ ಜಗನ್ಮೋಹನವಾದ ಪಕ್ಷಿಗಳನ್ನು ನೆನೆದನು. ತಕ್ಷಣ ದಿವ್ಯ ವಸ್ತ್ರಗಳು ಕಾಣಿಸಿ ಕೊಂಡವು. ನಳನು ಆ ವಸ್ತ್ರಗಳನ್ನು ಧರಿಸಿದ ಕೂಡಲೇ ವಿಕಾರ ರೂಪು ಇಲ್ಲವಾಯಿತು. ಅವನು ಮೊದಲಿನಂತೆ ಪರಮತೇಜದ ದಿವ್ಯ ಶರೀರದಲ್ಲಿ ಪ್ರಕಾಶಿಸಿದನು.

ಆಗ ಆಕಾಶದಲ್ಲಿ ದೇವತೆಗಳು ದುಂದುಭಿಯನ್ನು ಮೊಳಗಿಸಿ ಮಲ್ಲಿಗೆಹೂಗಳ ಮಳೆಗರೆದರು. ದೇವಾಂಗನೆಯರು ನಳ ಮಹಾರಾಜನನ್ನು ಹರಸುತ್ತ, ಅವನ ಮೇಲೆ ಮಂಗಳಾಕ್ಷತೆಯನ್ನು ಹಾಕಿದರು.

ದೇವತೆಗಳು ಕೊಂಡಾಡುತ್ತಿರಲು; ಯಮ ಸೂರ್ಯ ಬ್ರಹ್ಮಾದಿಗಳು ಶುಭವಾಗಲೆಂದು ಆಶೀರ್ವದಿಸುತ್ತಿರಲು; ದಮಯಂತಿಯು ಪತಿಯ ಪಾದಗಳಿಗೆ ವಂದಿಸಿದಳು. ನಳನು ಅವಳನ್ನು ಹರ್ಷದಿಂದ ಹಿಡಿದೆತ್ತಿ ಬಿಗಿದಪ್ಪಿಕೊಂಡನು. ಬ್ರಾಹ್ಮಣರು ಸಂಭ್ರಮಿಸಿದರು. ದಯಾಮಯನಾದ ಶ್ರೀಹರಿ ಅವರನ್ನು ಕರುಣೆಯಿಂದ ಕಾಪಾಡಿದನು.

# ನಳ ಭೂಪಾಲನ ಅಭ್ಯುದಯ

ಪಾಂಡು ಕುಮಾರನೇ ಕೇಳು. ನಳ ಭೂಪಾಲನ ಅಭ್ಯುದಯವನ್ನು, ಮಂಗಳಮಯ ಏಳಿಗೆಯನ್ನು, ದಮಯಂತಿಯ ತುಂಬು ಸಂಭ್ರಮ ಆನಂದವನ್ನು ಏನೆಂದು ವರ್ಣಿಸಲಿ.

ನಳನು ಸಂತೋಷದಿಂದ ಸ್ನಾನವನ್ನು ಮಾಡಿ ರೇಷ್ಮೆಯ ವಸ್ತ್ರಧರಿಸಿ ರತ್ನಾಭರಣಗಳನ್ನು ತೊಟ್ಟುಕೊಂಡನು. ಏರುಕಾಂತಿಯಲ್ಲಿ ಸಿಂಹಾಸನದ ಮೇಲೆ ಕುಳಿತನು. ಅಲ್ಲಿ ನೆರೆದಿದ್ದ ರಾಜರುಗಳು ನಳನೃಪನನ್ನು ನೋಡಿ – ಈತನು ಬ್ರಹ್ಮನೇ? ದೇವೇಂದ್ರನೇ? ಮನ್ಮಥನೇ? ವಿಷ್ಣುವೇ? ಚಂದ್ರನೇ? ಶಂಕರನೇ? ಶಿವಶಿವ!! ಅವರಾರು ಅಲ್ಲ. ಈತ ನಮ್ಮ ನಳ ಚಕ್ರವರ್ತಿ. ಪೂತು[೧], ಮಝುರೇ[೨] ಎಂದು ಕೊಂಡಾಟದ ಉದ್ಗಾರದೊಡನೆ ಸಂಭ್ರಮಿಸಿದರು.

ನಗರದ ಜನರೆಲ್ಲ ಬಂದು ನಳನೃಪನನ್ನು ನೋಡಿ ಕಾಣಿಕೆಗಳನ್ನು ನೀಡಿ ಮುದಗೊಂಡರು. ಋತುಪರ್ಣನು ಮಂತ್ರಿ ಮಾನ್ಯರೊಡನೆ ಬಂದನು. ಮುತ್ತು, ರತ್ನ, ವಜ್ರ, ಚಿನ್ನದ ಆಭರಣ ಹಾಗೂ ಇತರ ಅಮೂಲ್ಯ ವಸ್ತುಗಳನ್ನು ನಳನ ಮುಂದಿಟ್ಟು ಕೈ ಮುಗಿದು,

'ನೀವು ಚಂದ್ರವಂಶದ ನೃಪ ಸಾರ್ವಭೌಮರು. ಪ್ರಸಿದ್ಧ ಮಂಗಳ ಸ್ವರೂಪರು, ವೈರಿಗಳೆಂಬ ಆನೆಗಳಿಗೆ ಸಿಂಹದಂತಿರುವ ಯುದ್ಧ ವೀರರು, ದಯಾಶೀಲರು. ನಾನು

---

೧. ಪೂತು=ಭಲೆ, ಭಾಪು ಎಂಬಂತೆ ಬಳಸುವ ಒಂದು ಕೊಂಡಾಟದ ಮಾತು, ಉದ್ಗಾರ.

೨. ಮಝುರೇ=ಕೊಂಡಾಟದಲ್ಲಿ ಬಳಸುವ ಒಂದು ಅವ್ಯಯ.

ತಾಮಸ, ಮತಿಗೇಡಿ ಪಾಮರ. ನನ್ನ ಗುಣದೋಷಗಳನ್ನು ಚಿತ್ತದಲ್ಲಿಟ್ಟುಕೊಳ್ಳದೆ ನೀವು ಪ್ರೀತಿಯಿಂದ ಸಲಹಬೇಕು.

'ನೀವು ರಥಕ್ಕೆ ಕುದುರೆಗಳನ್ನು ಹೂಡಿದಾಗಲೇ ನಿಮ್ಮನ್ನು ತಿಳಿಯದ ಮೂಢಮತಿ ಸಾರಥಿಯಾಗಿಸಿಕೊಂಡೆ. ನನ್ನ ಅಪರಾಧಗಳನ್ನು ಕ್ಷಮಿಸಿ, ರಕ್ಷಿಸಿ' ಎಂದು ಪಾದಕ್ಕೆ ಎರಗಿದನು.

'ನನಗೆ ನಿಮ್ಮಲ್ಲಿ ಕೋಪವಿಲ್ಲ' ಎಂದು ಹೇಳಿದ ನಳನೃಪನು ಅವನನ್ನು ಹಿಡಿದೆತ್ತಿ ಸಮಾಧಾನ ಪಡಿಸಿದನು. ರತ್ನಾಭರಣಗಳನ್ನು ಕೊಟ್ಟನು.

ಅದೇ ಸಮಯಕ್ಕೆ ಅಲ್ಲಿಗೆ ಮೈತ್ರೇಯ ಮುನಿ ಪುಂಗವರು ಇತರ ಮುನಿಗಳೊಂದಿಗೆ ಆಗಮಿಸಿದರು. ಅವರಿಗೆ ನಳಮಹಾರಾಜನು ಸಾಷ್ಟಾಂಗ ನಮಸ್ಕಾರ ಮಾಡಿದನು. ರಾಜನನ್ನು ಹಿಡಿದೆತ್ತಿ ನಸು ನಕ್ಕರು. ಪೀಠದಲ್ಲಿ ಕುಳಿತುಕೊಂಡು ಹೇಳಿದರು,

'ಎಲೆ ನಳನೃಪತಿ, ನಿನಗೆ ಶ್ರೀಹರಿಯ ಕೃಪೆ ಸದಾ ಇದೆ. ನಿನಗೆ ಅಸಾಧ್ಯವಾದುದು ಯಾವುದೂ ಇಲ್ಲ. ಕಲಿಪುರುಷನಿಂದ ನಿನಗೆ ಕೇಡುಂಟಾಯಿತು. ನೀನು ಹೆಂಡತಿ ಮಕ್ಕಳನ್ನು ಅಗಲಿ ಕಷ್ಟಕ್ಕೆ ಈಡಾದೆ, ತುಂಬಾ ನೊಂದೆ. ಸತ್ಯವನ್ನು ಬಿಡದೆ ಸರಳವಾಗಿ ಬದುಕಿದೆ. ಕುಲಾಂಗನೆಯಾದ ನಿನ್ನ ಪತ್ನಿಯ ಪುಣ್ಯದಿಂದ ಎಲ್ಲ ಸಿರಿಸಂಪತ್ತು ಲಭಿಸಿತು. ಈ ಲೋಕದಲ್ಲಿ ನಿನ್ನ ಸರಿಸಮಾನರು ಯಾರಿದ್ದಾರೆ?'

'ಪೂಜ್ಯರೇ, ಎಲ್ಲವೂ ತಮ್ಮ ಆಶೀರ್ವಾದ.'

'ರಾಜನೇ, ಆ ಕಲಿಪುರುಷನು ಹಿಂದೆ ಹರಿಗೆ ನೆಲೆಗೆಡಿಸಿದ. ಈಶ್ವರನು ಭಿಕ್ಷೆ ಬೇಡುವಂತೆ ಮಾಡಿದ. ಬ್ರಹ್ಮನ ತಲೆಯನ್ನು ಅಪಹರಿಸುವಂತೆ ಮಾಡಿದ. ದಯಾಹೀನನಾದ ಅವನು ನಿನ್ನನ್ನು ಮುಟ್ಟಿ ಕಾಡಿಸಲು ಹಲವು ದಿನ ಕಾದು ಹಠದಿಂದ ನಿನಗೆ ತಗುಲಿಕೊಂಡ. ನೀನು ಇತರ ರಾಜರಂತಿಲ್ಲ. ಲಕ್ಷ್ಮೀವಲ್ಲಭನ ಪ್ರತಿರೂಪ. ನಿನ್ನಲ್ಲಿ ಹೆಚ್ಚು ಕಾಲ ನಿಲ್ಲಲಾಗದ ಕಲಿಪುರುಷ ಬೇಗ ತೆರಳಿದ. ನಿನಗೆ ಉತ್ತಮ ಸಾಮ್ರಾಜ್ಯ ಪದವಿ ದೊರಕುತ್ತದೆ' ಎಂದು ಕೊಂಡಾಡಿ ಮಂತ್ರಾಕ್ಷತೆ ಹಾಕಿ ನಳನೃಪನನ್ನು ಹರಸಿದರು. ಮುನಿವೃಂದ ಸಂತೋಷಗೊಂಡಿತು.

ನಳಮಹಾರಾಜನಿಗೆ ಮುತ್ತೈದೆಯರು ನಲವಿಂದ ಆರತಿ ಬೆಳಗಿದರು. ಲಲನೆಯರು ಕೂಡಿ ಶೋಭಾನೆ ಹಾಡಿದರು. ಕಹಳೆಗಳು ಊದಿದವು. ಶಂಖ ಧ್ವನಿಗೈದವು. ಭೇರಿ ಮೃದಂಗಗಳು ಬಾರಿಸಿ, ವಿವಿಧ ವಾದ್ಯಗಳು ರಭಸದಲ್ಲಿ ಮೊಳಗಿ ಜನರನ್ನು ರಂಜಿಸಿದವು. ನಳನೃಪನಿಗೆ ರಾಜಗುರುಗಳು ಮುಯ್ಯಗಳನ್ನು ಓದಿಸಿದರು. ಮುನಿಗಳು ದಮಯಂತಿಗೆ ಮುತ್ತೈದೆತನ ಸದಾ ಇರಲಿ ಎಂದು ಹಾರೈಸಿದರು.

ಧರ್ಮರಾಜನೇ ಕೇಳು. ವಿದರ್ಭ ರಾಜ ಭೀಮನೃಪಾಲನು ಮುನಿವರ್ಯರನ್ನು ಉಪಚರಿಸಿದನು. ಬ್ರಾಹ್ಮಣರಿಗೆ ಗೋವು, ಕನಕ ಮೊದಲಾದ ಅಮೂಲ್ಯ ವಸ್ತುಗಳನ್ನು ದಾನವಾಗಿ ನೀಡಿದನು. ನಳನೃಪನಿಗೆ ಎಲ್ಲ ಆಭರಣಗಳನ್ನು, ಆನೆ ಕುದುರೆ ರಥಗಳನ್ನು ನೀಡಿದನು. ಪುರಜನರನ್ನು ಸಂತೈಸಿ, ಎಲ್ಲ ಬಂಧು ಬಾಂಧವರನ್ನು ಬೀಳ್ಕೊಟ್ಟನು. ಓಲಗವು ಚದುರಿತು. ಯಾಚಕರು ಕೊಂಡಾಡಿದರು. ರಾಜರುಗಳು ತಮ್ಮ ನಗರಗಳಿಗೆ ತೆರಳಿದರು. ಚೈದ್ಯ ನೃಪತಿಯು ಅಯೋಧ್ಯಾಪುರಕ್ಕೆ ಹಿಂದಿರುಗಿದನು.

## ದಂಡು ನಡೆಯಲಿ ನಿಷಧಪುರಿಗೆ

ನಳನು ದಮಯಂತಿಯೊಡನೆ ಮಾವನ ಮನೆಯಲ್ಲಿ ಒಂದು ವರ್ಷ ಸಿರಿಯ ಹಿರಿಮೆಯಲ್ಲಿ ಸಂತೋಷದಿಂದಿದ್ದನು. ಅನಂತರ ಮಾವ ಭೀಮನೃಪನೊಡನೆ ತಾನು ನಿಷಧಪುರಕ್ಕೆ ಹೋಗಬೇಕೆಂದು ತಿಳಿಸಿ, ಅದರ ಬಗ್ಗೆ ಆಲೋಚಿಸಿದನು. ಭೀಮನೃಪನು,

'ನಿಷಧಪುರಿಗೆ ದಂಡು ನಡೆಯಲಿ. ಭಂಡಪುಷ್ಕರನ ಮಾತೇನು? ಚಿಂತಿಸಿ ಫಲವಿಲ್ಲ. ಏಳಿ, ಸನ್ನದ್ಧರಾಗಿ' ಎಂದು ಹೇಳಿದನು.

ರಾಜರ ತಂಡವು ಉತ್ಸಾಹದಿಂದ ಸಿದ್ಧವಾಯಿತು. ನಳನ ನೇತೃತ್ವದಲ್ಲಿ ಸೈನಿಕರು ಪ್ರಬಲವಾದ ಆಯುಧಗಳೊಡನೆ ಯುದ್ಧಕ್ಕೆ ನಡೆದರು. ಕುದುರೆಗಳಿಗೆ ಜೀನು ಹಾಕಿ ರಥಗಳನ್ನು ಸಜ್ಜುಗೊಳಿಸಿದರು. ಯುದ್ಧಕ್ಕೆ ಮದಗಜಗಳು ಗುಂಪಾಗಿ ನಡೆದವು. ಕಾಲಾಳುಗಳು ಒಂದುಗೂಡಿದರು.

ಸಮುದ್ರ ಬೋರ್ಗರೆವಂತೆ ಭೇರಿಗಳು ಮೊಳಗಿದವು. ನಳರಾಜನು ಅಗಣಿತ ಸೈನ್ಯದೊಡನೆ ಯುದ್ಧಕ್ಕೆ ಹೊರಟನು. ಅವನು ಏರಿದ ರಥವು – ಹಿಂದೆ ವನವಾಸಕ್ಕೆ ಹೋದಾಗ ಅವನ ಮಕ್ಕಳನ್ನು ವಿದರ್ಭಕ್ಕೆ ಬಿಟ್ಟ ರಥವಾಗಿತ್ತು. ಅದು ನವರತ್ನಗಳಿಂದ ಹೊಳೆವ ಸುವರ್ಣ ಕಲಶ ಹೊಂದಿತ್ತು. ಅದು ಮನ್ಮಥನ ವಾಸಸ್ಥಾನದಂತೆ ಮನೋಹರವಾಗಿತ್ತು.

ನಳರಾಜನ ಸೈನಿಕರ ದಾಳಿಗೆ ದಿಕ್ಪಾಲಕರೇ ಅಂಜಿದರು! ಮುಂಚೂಣಿಯ ಸೈನಿಕರು ಪ್ರಮುಖ ಪ್ರದೇಶಗಳನ್ನು ಕೈವಶ ಮಾಡಿಕೊಂಡರು. ನಳನ ದಾಳಿ ತಿಳಿದ ಪುಷ್ಕರನು ಕೋಪಗೊಂಡು ದಳಪತಿಯನ್ನು ಕರೆದು,

'ನಳನು ರಾಜ್ಯ ಕಳೆದುಕೊಂಡ ದುಃಖದಲ್ಲಿ ಯುದ್ಧಕ್ಕೆ ಬಂದಿದ್ದಾನೆ. ಅದರಲ್ಲಿ ತಪ್ಪೇನಿಲ್ಲ. ನಮ್ಮ ಸೈನಿಕರನ್ನು ಬರ ಹೇಳಿ. ಅವನನ್ನು ಸೆರೆ ಹಿಡಿಯಿರಿ' ಎಂದು ಹೇಳಿ ತನ್ನ ಸಾಗರದಂತಹ ಸೈನ್ಯವನ್ನು ಕಳುಹಿಸಿದನು.

ಪುಷ್ಕರನ ಸೈನಿಕರು ಹರಿಗೆ[೧], ಖಡ್ಗ, ತೋಮರ[೨], ಪರಶು[೩], ಮುದ್ಗರ[೪], ಕುಂತ[೫], ಬಲ್ಲೆಹ[೬], ಪರಿಘ[೭], ಚಕ್ರ, ತ್ರಿಶೂಲ, ಕಕ್ಕಡ[೮], ಭಿಂಡಿವಾಳ[೯], ಸುರಗಿ[೧೦], ಸಬಳ[೧೧], ಮುಸುಂಡಿ[೧೨] ಮೊದಲಾದ ವಿವಿಧ ಬಗೆಯ ಅಪಾರ ಆಯುಧಗಳನ್ನು ತೆಗೆದುಕೊಂಡು ನಳನ ಸೈನ್ಯದ ಮೇಲೆ ಆಕ್ರಮಣ ನಡೆಸಿದರು.

ನಳನ ಸೈನಿಕರು ಎರಡು ಭಾಗವಾಗಿ ನುಗ್ಗಿ ಬರುತ್ತಿರುವುದನ್ನು ಕಂಡರು. 'ಎಲವೋ, ಸಣ್ಣ ಚುಕ್ಕಿಗಳಿರಾ' ಎಂದು ಹೇಳುತ್ತ, ಭಲೇ, ಭಾಪುರೇ ಉದ್ಘೋಷದೊಡನೆ ತಮ್ಮವರನ್ನು ಹುರಿದುಂಬಿಸಿದರು. ಆಯುಧಗಳಿಂದ ರಭಸವಾಗಿ ಹೊಡೆದರು. ಸುರಗಿಗಳಿಂದ ಆನೆಗಳನ್ನು ತಿವಿದರು. ರಥಗಳನ್ನು ಮುರಿದರು. ಮೂದಲಿಸುತ್ತ ಪರಿಘ ಮುಂತಾದ ಆಯುಧಗಳಿಂದ ಕಾಲಾಳುಗಳನ್ನು ಸಂಹರಿಸಿದರು.

ಗುಂಪಾಗಿ ಬರುತ್ತಿರುವ ಕುದುರೆಗಳನ್ನು ಬಂಧಿಸಿ ಕಡಿದು ಹಾಕಿದರು. ಸೈನಿಕರನ್ನು ಬೆನ್ನಟ್ಟಿ ಕಡಿದರು. ಸಾಹಸದಿಂದ ಹೋರಾಡುತ್ತ ನುಗ್ಗಿ ಬರುವ ವೈರಿ ನಾಯಕರ ರಕ್ತ ಸಿಡಿಸಿದರು. ಅದು ಭೂಮಿಯಲ್ಲಿ ಚೆಲ್ಲಿ ಹರಿಯಿತು. ಎರಡೂ ಕಡೆಯ ಜಗಜಟ್ಟಿಗಳು ದೇವತೆಗಳೇ ಆಶ್ಚರ್ಯಗೊಳ್ಳುವಂತೆ ಕಾಳಗ ನಡೆಸಿದರು. ಸಾರಥಿಗಳನ್ನು ಎಚ್ಚರಿಸಿ ರಥಿಕರು ಬಾಣ ಪ್ರಯೋಗಿಸಿ ವೈರಿಗಳ ತಲೆಗಳನ್ನು ಉರುಳಿಸಿದರು. ತೇರಿನ ಕುದುರೆಗಳು ಮುಗ್ಗುರಿಸಿದವು. ರಣಧೀರರು ಹೋರಾಡಿ ಗಾಯಗೊಂಡು ನರಳಿದರು.

ನಳನ ಸೈನ್ಯವು ವೈರಿಯ ಆಕ್ರಮಣವನ್ನು ತಡೆಯಲಾರದೆ ದುಃಸ್ಥಿತಿಗೀಡಾಯಿತು. ಸೈನಿಕರು ಧೈರ್ಯಗುಂದಿ ಹಿಂತಿರುಗಿ ಬರುತ್ತಿರುವುದನ್ನು ಕಂಡು ನಳನು ಕೋಪಗೊಂಡನು. ಸಾರಥಿಯನ್ನು ಕರೆದು,

'ಪುಷ್ಕರನ ಬಲ ಕೈಮೀರಿ ಬರುತ್ತಿದೆ. ಕುದುರೆಯನ್ನು ಅತ್ತ ತಿರುಗಿಸು. ಅವರ

---

೧. ಹರಿಗೆ = ಗುರಾಣಿ
೨. ತೋಮರ = ತುದಿಯಲ್ಲಿ ಮೊನಚಾಗಿರುವ ಈಟಿಯಂತಹ ಒಂದು ಬಗೆಯ ಆಯುಧ.
೩. ಪರಶು = ಗಂಡುಗೊಡಲಿ
೪. ಮುದ್ಗರ = ೧. ಒಂದು ಬಗೆಯ ಆಯುಧ. ೨. ಸುತ್ತಿಗೆ
೫. ಕುಂತ = ಈಟಿ; ಭರ್ಜಿ
೬. ಬಲ್ಲೆಹ = ಒಂದು ಬಗೆಯ ಆಯುಧ; ಈಟಿ; ಭಲ್ಲೆ
೭. ಪರಿಘ = ಕಬ್ಬಿಣದ ಒಂದು ಬಗೆಯ ಆಯುಧ; ಕಬ್ಬಿಣದ ಮೊನೆಗಳಿಂದ ಕೂಡಿದ ಗದೆ.
೮. ಕಕ್ಕಡ = ಬಟ್ಟೆಯನ್ನು ಎಣ್ಣೆಯಲ್ಲಿ ನೆನೆಯಿಸಿ ಉರಿಸುವ ಕೈದೀಪ; ದೀವಟಿಗೆ
೯. ಭಿಂಡಿವಾಳ = ಕೈಯಿಂದ ಎಸೆಯುವ ಸಣ್ಣ ಭಲ್ಲೆಯಂತಹ ಆಯುಧ.
೧೦. ಸುರಗಿ = ಸಣ್ಣ ಕತ್ತಿ, ಚೂರಿ
೧೧. ಸಬಳ = ಈಟಿ; ಭರ್ಜಿ; ಕೊಂತ.
೧೨. ಮುಸುಂಡಿ = ಒಂದು ಬಗೆಯ ಆಯುಧ.

ಬೆನ್ನಿಂದ ಕರುಳು ತೆಗೆದು ನಾಶ ಮಾಡುವೆ' ಎಂದು ಹೇಳಿ ಬಿಲ್ಲಿಗೆ ಹೆದೆ[೧] ಏರಿಸಿ ಬಾಣವನ್ನು ಬಿಡಲು ಧರೆ ನಡುಗಿತು. ಆಗ ವಿಮುಖವಾಗಿದ್ದ ಸೈನ್ಯ ಧೈರ್ಯದಿಂದ ಒಟ್ಟಾಗಿ ಮುನ್ನುಗ್ಗಿತು. ಮೊರೆವ ಕಹಳೆಯ ಶಬ್ದಕ್ಕೆ ಯೋಧರು ಉತ್ಸಾಹದಿಂದ ಆವೇಶ ಭರಿತರಾಗಿ ಪುಷ್ಕರನ ಸೈನ್ಯವನ್ನು ಸದೆಬಡಿದರು.

## ಗಾಳಿ ಮುಂದೌಕಿದಡೆ ಘನಮೇಘಾಳಿ ನಿಲುವುದೆ

ನಳನ ಬಾಣಗಳು ಪುಷ್ಕರನ ಸೈನ್ಯದ ಮೇಲೆ ಕೆಂಡದ ಮಳೆ ಕರೆದಂತೆ ಪ್ರಯೋಗ ವಾಯಿತು. ಅವನ ರಥಿಕರ ತಲೆ ಚೆಂಡಾಡಿದವು. ಕುದುರೆಗಳು ಕಾಲಾಳುಗಳು ನಾಶವಾದವು. ನಳನು ಸಂದರ್ಭ ನೋಡಿ, ಅವಕಾಶ ಮಾಡಿಕೊಂಡು ತನ್ನ ದಂಡನ್ನು ವೈರಿ ಸೈನ್ಯದೊಳಗೆ ನುಗ್ಗಿಸಿದನು. ಪುಷ್ಕರನ ಸೈನಿಕರಿಗೆ ಬರಸಿಡಿಲು ಬಡಿದಂತಾಗಿ, ಅವರು ಆಯುಧಗಳನ್ನು ಎಸೆದು ಹಿಮ್ಮೆಟ್ಟಿ ಓಡಿದರು.

ಬಿರುಗಾಳಿಗೆ ಘನಮೋಡ ಹೇಗೆ ನಿಲ್ಲದೋ ಹಾಗೆ ನಳನ ಶರಜಾಲಕ್ಕೆ ವೈರಿ ರಾಜರ, ರಾವುತರ ತಲೆಗಳು ತುಂಡಾಗಿ ಹೋದವು. ಪುಷ್ಕರನ ಸೈನ್ಯವು ಸೋತು ದಿಕ್ಕೆಟ್ಟು ಚದುರಿ ಹೋಯಿತು.

ಧರ್ಮರಾಯನೇ ಕೇಳು. ಆ ಯುದ್ಧದಲ್ಲಿ ಆರು ಸಾವಿರ ರಥಗಳು, ಹದಿನಾರು ಸಾವಿರ ಆನೆಗಳು, ಇಪ್ಪತ್ತಾರು ಸಾವಿರ ಕುದುರೆಗಳು, ಲಕ್ಷ ಕಾಲಾಳುಗಳು ಯಮಪುರಿ ಯನ್ನು ಸೇರಿದರು. ಮಿಕ್ಕ ಸೇನೆಯ ಪಾಡನ್ನು ಏನೆಂದು ಹೇಳುವುದು?

ಪುಷ್ಕರನ ಸೈನಿಕರು ಶರಣಾದುದನ್ನು ಸೂಚಿಸಲು ಮರವನ್ನು, ಹುತ್ತವನ್ನು ಏರಿದರು. ಕೈ ಮುಗಿದು ರಕ್ಷಿಸಿ ಎಂದರು. ಕಾಲಾಳುಗಳು ಬಾಯಲ್ಲಿ ಬೆರಳು ಕಚ್ಚಿಕೊಂಡು ಶರಣಾಗತಿ ಸೂಚಿಸಿದರು. ಆ ದುಸ್ಥಿತಿಯಲ್ಲಿ ಓರ್ವ ಸೈನಿಕ ಪುಷ್ಕರನ ಬಳಿ ಬಂದು,

'ಜೀಯ, ನಳನೃಪನ ಬಾಣಕ್ಕೆ ನಮ್ಮ ಸೈನ್ಯ ಪತನ ಹೊಂದಿದೆ. ಇನ್ನು ಕಾಳಗದ ಗತಿ ಏನು?' ಎಂದು ಕೇಳಿದನು. ಆಗ ಕೋಪಗೊಂಡ ಪುಷ್ಕರ ತನ್ನ ಉಳಿದ ಸೈನ್ಯವನ್ನು ಕರೆಸಿದನು.

ಧರ್ಮರಾಯನೇ ಕೇಳು. ಪುಷ್ಕರನು ಅರಮನೆಗೆ ಬಂದು ಹೆಚ್ಚಿನ ಆಯುಧಗಳನ್ನು ತರಿಸಿದನು. ಯುದ್ಧ ವೀರರನ್ನು ಕರೆದು ಬಿಲ್ಲು ಬಾಣಗಳನ್ನು ನೀಡಿದನು. ಆನೆ, ಕುದುರೆ, ಕಾಲಾಳು ಪಡೆಗಳು ಬಂದು ಸೇರಿದವು. ವಾದ್ಯದ ಮೊಳಗಿನಲ್ಲಿ ಯುದ್ಧಕ್ಕೆ ಹೊರಡಲು ಸಿದ್ಧನಾದನು. ಹಿಂದೆ ನಿಷಧಪತಿ ಕಾಳಗದಲ್ಲಿ ಬಳಸುತ್ತಿದ್ದ ಧರ್ಮಗಹಳೆಯನ್ನು ತೆಗೆಸಿದನು. ಕೋಪಾಗ್ನಿಯಲ್ಲಿ ಕುದಿಯುತ್ತ ಅವನು ಮಂತ್ರಿ ಮಾನ್ಯರೊಡನೆ,

'ಇಂದು ಶತ್ರುಗಳಿಗೆ ಜಯವಾಗಿದೆ. ಇನ್ನು ನಾನು ಹೋಗಿ ಆ ವಿರೋಧಿಗಳನ್ನು ಹಿಮ್ಮೆಟ್ಟಿಸುವೆ' ಎಂದು ಹೇಳಿದನು. ಆಗ ಮಂತ್ರಿಯು ಕೈಮುಗಿದು ಹೀಗೆ ಬಿನ್ನವಿಸಿದನು :

---

೧. ಹೆದೆ = ಬಿಲ್ಲಿಗೆ ಹೂಡುವ ಬಾಣಕ್ಕೆ ಆಧಾರವಾದ ದಾರ.

## ಅರಿಭಯಂಕರ ನೈಷಧನ ಸಂಗರದಿ ಗೆಲುವವರಾರು

'ಪ್ರಭುವೇ, ಶತ್ರು ಭಯಂಕರನಾದ ನಳನನ್ನು ಯುದ್ಧದಲ್ಲಿ ಗೆಲ್ಲಲು ಯಾರಿಗೂ ಸಾಧ್ಯವಿಲ್ಲ. ಹೀಗಿರುವಾಗ ಉಳಿದ ಮಾನವರ ಪಾಡೇನು? ಇನ್ನು ಕಾಳಗದ ಮರುಳತನ ಬೇಡ. ನಳರಾಜನನ್ನು ಕರೆಸಿ ಸಂಧಿಯ ಮಾಡಿಕೊಳ್ಳೋಣ. ಮತ್ತೆ ಜೂಜಾಡಿ ಅವನನ್ನು ಗೆಲ್ಲೋಣ. ಅದೇ ಉಚಿತ.'

'ಮಂತ್ರಿಯೇ, ರಾಜ್ಯದ ಉಳಿವು ಎಂದರೆ ಕಾಳಗದಲ್ಲಿ ಜಯಿಸುವುದು. ಆದರೂ, ನಿನ್ನ ಮಾತಿನಲ್ಲಿ ಅರ್ಥವಿದೆ.'

'ರಾಜನೇ, ಜಯಲಕ್ಷ್ಮಿಯು ವೀರಸೇನನ ತನಯ ನಳನನ್ನು ಸೇರಿದ್ದಾಳೆ. ಋತುಪರ್ಣ, ಚೈದ್ಯ, ವಿದರ್ಭ ರಾಜರು ಮತ್ತು ಅವರ ಪಡೆ ನಳನ ಜೊತೆಗಿದೆ. ಸಂಗ್ರಾಮದಲ್ಲಿ ನಳನಿಗೆ ಸರಿಮಿಗಿಲಾದವರು ಯಾರಿದ್ದಾರೆ? ಯೋಚಿಸು. ವಿಚಾರಿಸದೆ ಕಾದಾಡಿದರೆ ಮರಣ ತಪ್ಪದು' ಎಂದು ಹೇಳಿದನು.

## ಕುಟಿಲ ಹೃದಯದ ನೆಲೆಯ ಬಲ್ಲೆನು

ಮಂತ್ರಿಯ ಹಿತನುಡಿಯಂತೆ ಪುಷ್ಕರನು ಬಂದು ನಳನನ್ನು ಕಂಡು, ನಸುನಗುತ್ತ ಹೇಳಿದನು,

'ಮಹೀಪತಿ, ನನಗೆ ನಿಮ್ಮಲ್ಲಿ ಯುದ್ಧವೇತಕ್ಕೆ? ಅದನ್ನು ನಿಲ್ಲಿಸೋಣ. ನೀವು ಜೂಜಿನಲ್ಲಿ ನಿಪುಣರು. ನಿಮ್ಮ ಮನಸ್ಸಿಗೆ ಹರ್ಷವಾಗಲು ಮತ್ತೊಮ್ಮೆ ಜೂಜಾಡೋಣ. ಅದನ್ನು ಈ ರಾಜರೆಲ್ಲ ಈಕ್ಷಿಸಲಿ.'

'ಎಲೈ ಪುಷ್ಕರನೇ ಕೇಳು. ನೀನು ಹೇಳಿದಂತೆ ಆಗಲಿ. ನೀನು ಯುದ್ಧಕ್ಕೆ ಹೆದರುವೆ. ನೀನು ಜೂಜಾಟದಲ್ಲಿ ಪರಿಣತನು. ನಮ್ಮನ್ನು ಜೂಜಿಗೆ ಕರೆದೆ. ಅದರಲ್ಲಿ ತಪ್ಪೇನೂ ಇಲ್ಲ. ಯುದ್ಧದಲ್ಲಾಗಲೀ, ಜೂಜಿನಲ್ಲಾಗಲೀ ನಿನ್ನನ್ನು ಗೆಲ್ಲುತ್ತೇನೆ. ನಿನ್ನ ಕುಟಿಲ ಹೃದಯದ ರಹಸ್ಯ ನನಗೆ ಗೊತ್ತಿದೆ. ನಿನ್ನ ಮನಸ್ಸಿಗೆ ಸರಿಕಂಡಂತೆ ಮಾಡು' ಎಂದು ನಳನೃಪ ಹೇಳಿದನು.

ಧರ್ಮರಾಜನೇ ಕೇಳು. ಪುಷ್ಕರನು ನಳನನ್ನು ತನ್ನ ಅರಮನೆಗೆ ಕರೆದುಕೊಂಡು ಬಂದನು. ಮೊದಲು ಕಲಿಪುರುಷನಿಂದ ಗೆದ್ದ ಹಿರಿಮೆಯಲ್ಲಿ, ಈಗಲೂ ನಳನೃಪನನ್ನು ಸುಲಭವಾಗಿ ಗೆಲ್ಲಬಹುದೆಂದುಕೊಂಡನು. ಆಪ್ತೇಷ್ಟರನ್ನು ಕರೆಸಿ ಓಲಗವನ್ನು ಏರ್ಪಡಿಸಿದನು. ಸಭಾಸದರೆಲ್ಲ ತಮ್ಮ ತಮ್ಮ ಸ್ಥಾನದಲ್ಲಿ ಕುಳಿತುಕೊಂಡರು. ಅನಂತರ ಆಟಗಾರರ ಮುಂದೆ ಪಗಡೆಯ ದಾಳಗಳನ್ನು ತಂದಿರಿಸಿದರು.

ಪುಷ್ಕರನು 'ನಳನೃಪತಿಯೇ, ನೀನು ಗೆದ್ದರೆ ಇಡೀ ರಾಜ್ಯವನ್ನು ನಾನು ಬಿಟ್ಟುಕೊಡುವೆ.

ಸೋತರೆ ದಮಯಂತಿಯನ್ನು ನನಗೆ ಒಪ್ಪಿಸಬೇಕು' ಎಂದು ಪಣವಿಟ್ಟನು. ನಳನು ಇಳೆಯಲ್ಲಿರುವ ಎಲ್ಲ ವೃಕ್ಷಗಳ ಹೃದಯ ಮರ್ಮ ತಿಳಿದ ಹೆಗ್ಗಳಿಕೆಯಿಂದ ತಾನು ಗೆಲ್ಲುವೆ ಎಂಬ ಧೈರ್ಯದಿಂದ ಪಣಕ್ಕೆ ಒಪ್ಪಿದನು.

ಇಬ್ಬರೂ ಆಟವನ್ನು ಪ್ರಾರಂಭಿಸಿ ದಾಳಗಳನ್ನು ಹಾಕಿದರು. ಆವೇಶದಿಂದ ಪೈಪೋಟಿಯಲ್ಲಿ ಮನ ನಲಿದು ಆಡಿದರು. ನಳನು ತನಗೆ ಬೇಕಾದುದನ್ನು ಬಯಸಿ ದುಗ, ಬಾರ, ಇತ್ತಿಗ ಎಂದು ಆಡಿದಾಗ ಅವು ಬಿದ್ದವು. ನಳನಿಗೆ ದಾಳ ಹಾಕುವ ಕೈಚಳಕ ಗೊತ್ತಾಯಿತು. ನೋಡುತ್ತಿರುವವರಿಗೆ ಆಶ್ಚರ್ಯವಾಗುವಂತೆ ನಳನೃಪನು ಜಯಗಳಿಸಿದನು. ಅದನ್ನು ಆನಂದದಿಂದ ಉದ್ಘೋಷಿಸಿದನು.

## ಗುಣಸಂಪನ್ನನೇರಿದ ರತ್ನಸಿಂಹಾಸನವ

ಸೋತು ಪುಷ್ಕರನು ಖಿನ್ನನಾದನು. ಸಂತೋಷ ಅವನಿಂದ ದೂರವಾಗಿ ವಿಷಾದಕ್ಕೊಳಗಾಗಿ ದುಃಖಿತನಾದನು. ಗುಣಸಂಪನ್ನನಾದ ನಳನೃಪತಿಯು ರತ್ನಸಿಂಹಾಸನವನ್ನು ಏರಿದನು. ಅಲ್ಲಿ ನೆರೆದಿದ್ದ ಮುನಿಜನರು ಶ್ರೀಹರಿಯ ಕೃಪೆ ನಿನಗೆ ಲಭಿಸಲಿ ಎಂದು ಕೊಂಡಾಡಿ ಹರಸಿದರು. ದೇವ ದುಂದುಭಿ ಮೊಳಗಿತು. ಆಕಾಶದಲ್ಲಿ ದೇವತೆಗಳು ಒಟ್ಟುಗೂಡಿ ನಳನ ಮೇಲೆ ಹೂವಿನ ಮಳೆಗರೆದರು. ಪಂಡಿತರು, ಸಜ್ಜನರು, ರಾಜರು ನಳನೃಪನನ್ನು ಆದರದಿಂದ ಉಪಚರಿಸಿದರು. ನಳಚಕ್ರವರ್ತಿಯು ಶ್ರೀವಿಷ್ಣುವಿನಂತೆ ಸಿಂಹಾಸನದಲ್ಲಿ ಕಂಗೊಳಿಸಿದನು.

ಪುರಜನರು ಬಂದು ರಾಜನನ್ನು ಕಂಡು ಪ್ರೀತಿಯಿಂದ ಕಾಣಿಕೆಗಳನ್ನು ನೀಡಿದರು. ದೇವತೆಗಳು ನಲಿದರು. ಮಂತ್ರಿಗಳು ಬಂಧು ಬಾಂಧವರೆಲ್ಲ ಕೈಮುಗಿದು ವಂದಿಸಿ, ಸಭೆಯಲ್ಲಿ ಕುಳಿತುಕೊಂಡರು. ನೃಪನಿಗೆ ಲಲನಾಮಣಿಯರು ಹರುಷದಿಂದ ಮನ ಒಲಿದು ಆರತಿ ಬೆಳಗಿದರು.

## ಉದಾರ ನಳನೃಪ

ನಳನೃಪನು ಹಿಗ್ಗು ಹಿಂಗಿ ದುಃಖಿತನಾದ ಪುಷ್ಕರನನ್ನು ಮನಸಾರೆ ಕ್ಷಮಿಸಿದನು. ಅವನನ್ನು ಪ್ರೀತಿಯಿಂದ ಕರೆದು,

'ಕೇಡುಂಟಾದುದು ಕಲಿಪುರುಷನಿಂದ. ನಿನ್ನದೇನೂ ತಪ್ಪಿಲ್ಲ. ವ್ಯಥೆಪಡಬೇಡ. ನನಗೆ ನಿನ್ನಲ್ಲಿ ಹಟದ ಮನೋಭಾವವಿಲ್ಲ. ಮೊದಲಿನಂತೆ ರಾಜ್ಯಭಾರ ಮಾಡುತ್ತ ನಮ್ಮ ಸೇವೆ ಮಾಡಿಕೊಂಡಿರು, ಹೋಗು' ಎಂದು ಹೇಳಿದನು.

ಆ ಮಾತುಗಳನ್ನು ಕೇಳಿದ ಪುಷ್ಕರನು ನಾಚಿ ವಿನಯದಲ್ಲಿ ಬಾಗಿ,

'ನೃಪನೇ, ನಿಮ್ಮ ಪಾದದಡಿಯಲ್ಲಿ ವಂಚಿಸಿ ಅಪರಾಧಿಯಾದೆ. ನನಗೇನು ಗತಿ ಕಾದಿದೆಯೋ. ಕೃತಘ್ನನನ್ನು ಕ್ಷಮಿಸಿದಿರಿ. ನೀವು ಸಜ್ಜನ ಶಿರೋಮಣಿ. ನಾನು ಗುಣಹೀನ.

ಕೃಪೆಯಿಂದ ರಕ್ಷಿಸಿ' ಎಂದು ಸಾಷ್ಟಾಂಗ ನಮಸ್ಕಾರ ಮಾಡಿದನು. ಅವನನ್ನು ಹಿಡಿದೆತ್ತಿ ನಳಮಹಾರಾಜನು,

'ಇದೆಲ್ಲ ಪೂರ್ವ ಜನ್ಮದ ಫಲ. ಇದಕ್ಕೆ ಯಾರೇನು ಮಾಡಲು ಸಾಧ್ಯ' ಎಂದು ನುಡಿದು, ಅವನ ಪಶ್ಚಾತ್ತಾಪದ ನುಡಿಗೆ ಮೆಚ್ಚಿ ಚಿನ್ನ, ರತ್ನಾಭರಣಗಳನ್ನು, ಬಂಗಾರದ ರಥವನ್ನು ಕೊಟ್ಟು ಗೌರವಿಸಿ ಬೀಳ್ಕೊಟ್ಟನು.

ಮಹೀಪಾಲ ನಳನು ಬಾಂಧವರು, ಮಂತ್ರೀಶ್ವರರು, ವಿದ್ವಾಂಸರು, ರಾಜರು, ಕರಣಿಕರು, ಆಪ್ತರು, ವೀರ ಪಟುಭಟರು, ಮಲ್ಲರು, ತರುಣಿಯರು, ಗಾಯಕರು, ಸುಜನರನ್ನೆಲ್ಲ ಕರೆದು ಗೌರವಿಸಿ ಉಡುಗೊರೆಗಳನ್ನು ನೀಡಿದನು.

ರಾಜನು ಕನಕ ಸಿಂಹಾಸನದಲ್ಲಿ ಕುಳಿತಿರಲು ಎರಡು ಕಡೆ ವನಿತೆಯರು ಚಾಮರವನ್ನು ಬೀಸುತ್ತಿದ್ದರು. ಮಂತ್ರಿಗಳು, ಬ್ರಾಹ್ಮಣರು, ಜಟ್ಟಿಗಳು, ಗಾಯಕರು, ವನಿತೆಯರಿಂದ ಆಸ್ಥಾನ ಶೋಭಿಸುತ್ತಿತ್ತು.

## ಸಕಲ ರಾಜ್ಯವನ್ನು ನ್ಯಾಯದಲಿ ಕೈಕೊಂಡು ನಿಮ್ಮನು ಪ್ರಿಯದಿಂ ಬರ ಹೇಳಿದನು

ವಿದರ್ಭದಲ್ಲಿ ದಮಯಂತಿಗೆ ನಳನ ಬಗ್ಗೆ ಚಿಂತೆ ಹೆಚ್ಚಾಯಿತು. ತನ್ನ ಕೆಳದಿಯರೊಡನೆ 'ನೃಪತಿಯು ಪಂತದಲ್ಲಿ ಪುಷ್ಕರನನ್ನು ಗೆದ್ದನೋ? ಸೋತನೊ? ನಮ್ಮ ಮೇಲೆ ಶ್ರೀಹರಿಯ ಕೃಪೆ ಹೇಗಿದೆಯೋ?' ಎನ್ನುವ ಸಮಯದಲ್ಲಿ ನಳನ ಮಂತ್ರಿಗಳು ಅಲ್ಲಿಗೆ ಆಗಮಿಸಿದರು. ಅವರು,

'ತಾಯೇ, ತಮ್ಮಲ್ಲೊಂದು ವಿಜ್ಞಾಪನೆ. ನಮ್ಮನ್ನು ನಳನೃಪನು ನಿಮ್ಮ ಬಳಿಗೆ ಕಳುಹಿಸಿದ್ದಾನೆ. ಪ್ರಭುವು ನಿರಾಯಾಸವಾಗಿ ಪುಷ್ಕರನನ್ನು ಗೆದ್ದು ಸಕಲ ರಾಜ್ಯವನ್ನು ಸ್ವೀಕರಿಸಿದ್ದಾನೆ. ನಿಮ್ಮನ್ನು ಪ್ರೀತಿಯಿಂದ ಬರಹೇಳಿದ್ದಾನೆ. ತಾವು ಹೊರಟು ಬರಬೇಕು' ಎಂದು ಹೇಳಿ ಪಾದಕ್ಕೆ ಎರಗಿದರು.

ಅದನ್ನು ಕೇಳಿ ಸಂತೋಷಗೊಂಡ ದಮಯಂತಿಯು ಅವರಿಗೆ ಆಭರಣ ಹಾಗೂ ಅಮೂಲ್ಯ ವಸ್ತುಗಳನ್ನು ಬಹುಮಾನವಾಗಿ ನೀಡಿದಳು. ಹರ್ಷೋಲ್ಲಾಸದಿಂದ ತಂದೆಗೆ ಬಂದು ನಮಿಸಿ ನಳನ ವಿಜಯ ವಾರ್ತೆ ತಿಳಿಸಿದಳು. ವಿನಯಪೂರ್ವಕವಾಗಿ,

'ನಾಳೆಯೇ ನನ್ನನ್ನು ನಿಷಧ ನೃಪನಲ್ಲಿಗೆ ಕಳುಹಿಸಿ' ಎಂದು ಕೇಳಿಕೊಂಡಳು. ಮಗಳನ್ನು ಆನಂದದಿಂದ ಭೀಮನೃಪನು ಅಪ್ಪಿಕೊಂಡನು.

ಭಂಡಾರದಿಂದ ಬಗೆ ಬಗೆಯ ವಸ್ತುಗಳನ್ನು ತೆಗೆಸಿದನು. ವೀರಯೋಧರಿಗೆ ಝಗ ಝಗಿಸುವ ಹೊನ್ನ ಆಯುಧಗಳನ್ನು ನೀಡಿದನು. ಸುಗುಣೆಯರಾದ ಸ್ತ್ರೀ ಪರಿವಾರದವರಿಗೆ ನವರತ್ನಗಳ ತೊಡವುಗಳನ್ನು ಕೊಟ್ಟನು. ರಾಜಾಜ್ಞೆಯಂತೆ ಪಯಣಿಸುವ ತೇರುಗಳಿಗೆ

ಬಿರುದಿನ ಬಾವಲಿಗಳ ಪಟಗಳನ್ನು ಕಟ್ಟಿ ಶೃಂಗರಿಸಿದರು.

ಕುದುರೆಗಳಿಗೆ ಜೀನು ಹಾಕಿದರು. ಆನೆಗಳ ಮೇಲೆ ಸವಾರಿಗಾಗಿ ಅಂಬಾರಿಯನ್ನು ರಚಿಸಿದರು. ರಥದ ಮೇಲೆ ಬೆಳಗುವ ಕಳಶಗಳಲ್ಲಿ ಶ್ವೇತ ಛತ್ರವನ್ನು ಕಟ್ಟಿದರು. ಸೊಗಸು ಬೀರುವ ವೀರರು ಕೈಗಳಲ್ಲಿ ಆಯುಧಗಳನ್ನು ಹಿಡಿದು ಸಜ್ಜಾದರು. ರಾಜರ ಪಕ್ಕದಲ್ಲಿ ಚಾಮರಗಳನ್ನು ಬೀಸುವವರು ಸಂಭ್ರಮದಿಂದ ನಿಂತರು.

ರತ್ನಗಳಿಂದ ರಚಿತವಾದ ರಥಗಳ ನಡುವೆ ಪಲ್ಲಕ್ಕಿಗಳ ಸಾಲುಗಳಿದ್ದವು. ಮಧ್ಯದಲ್ಲಿ ಘೀಳಿಡುವ ಆನೆಗಳನ್ನು ನಡೆಸುವ ಮಾವುತರ ಕಳ ಕಳ ರವವಿತ್ತು. ಕುಣಿವ ಕುದುರೆಗಳನ್ನು ಏರಿದ ರಾವುತರ ಸಮೂಹದಲ್ಲಿ ಚತುರಂಗಬಲವು ಗುಂಪಾಗಿ ಸಾಗಿತು. ಅವುಗಳ ಸಾಲುಛತ್ರಗಳ ಸೊಗಸು ಸಂಭ್ರಮವನ್ನು ಸೂಚಿಸುತ್ತಿತ್ತು. ನಾರಿಯರು ಗುಂಪು ಗುಂಪಾಗಿ ಬಂದರು. ತೇರಿನಲ್ಲಿ, ಪಲ್ಲಕ್ಕಿಯಲ್ಲಿ, ಕುದುರೆಗಳ ಮೇಲೆ, ಆನೆಗಳ ಅಂಬಾರಿಯಲ್ಲಿ ಆಸೀನರಾದರು. ಮುಂದೆ ಘನ ಗಂಭೀರವಾದ ವಾದ್ಯಗಳು ಮೊಳಗುತ್ತಿದ್ದವು.

## ಮನದ ಹರ್ಷಾನಂದದಲಿ ನಡೆತಂದು ಹೊಕ್ಕಳು ನಿಷಧ ಪಟ್ಟಣವ

ದಮಯಂತಿಯು ತನ್ನ ಮಕ್ಕಳೊಂದಿಗೆ ಬಂದು 'ದೇವ ಮುಕುಂದ ರಕ್ಷಿಸು' ಎಂದು ಹೇಳುತ್ತ, ರತ್ನಮಯ ರಥವನ್ನು ಏರಿ ಕುಳಿತಳು. ಹಿಂದೆ ಮುಂದೆ, ಎಡಬಲಗಳಲ್ಲಿ ನಾರಿ ವೃಂದ ನಡೆದು ಬರುತ್ತಿರಲು ಹರ್ಷಾನಂದದಲ್ಲಿ ನಿಷಧ ಪಟ್ಟಣವನ್ನು ಪ್ರವೇಶಿಸಿದಳು.

ಪುರಜನರು ಉಪ್ಪರಿಗೆಯಲ್ಲಿ, ಮಾಳಿಗೆಯಲ್ಲಿ ನಿಂತು; ಮನೆಯ ಕಿಟಕಿಗಳಿಂದ ಇಣುಕಿ ದಮಯಂತಿಯನ್ನು ನೋಡುತ್ತಿದ್ದರು. ಅವಳು ನೋಡುವವರನ್ನು ನಸುನಕ್ಕು ನೋಡಿ ಕೈ ಬೀಸುತ್ತ; ಹಾಡುವವರನ್ನು, ನರ್ತಿಸುವವರನ್ನು ಕಂಡು ನಲಿಯುತ್ತ ಅರ ಮನೆಗೆ ಬಂದಳು.

ಬಾಗಿಲ ಬಳಿ ರಥವಿಳಿದು ಸಂತೋಷದಿಂದ ನಿಂತಿರಲು, ಪಣ್ಯಾಂಗನೆಯರು ಸಂಭ್ರಮದಿಂದ ಆರತಿ ಬೆಳಗಿದರು. ಮುನಿ ವೃಂದವು 'ಶ್ರೀವಿಷ್ಣುವಿನ ಅನುಗ್ರಹ ನಿಮ ಗುಂಟಾಗಲಿ. ನೀವು ಸದಾ ಸುಖಿಯಾಗಿರಿ' ಎಂದು ಆಶೀರ್ವದಿಸುತ್ತ ಮಂತ್ರಾಕ್ಷತೆಗಳನ್ನು ತಳಿದರು.

ಹರಕೆಗಳನ್ನು ಸ್ವೀಕರಿಸುತ್ತ ದಮಯಂತಿ ಅರಮನೆಯನ್ನು ಪ್ರವೇಶಿಸಿದಳು. ನಳ ನೃಪಾಲನ ಚರಣ ಕಮಲಗಳಿಗೆ ನಮಸ್ಕರಿಸಿ ಅವನನ್ನು ಮನ ತುಂಬಿ ನೋಡಿದಳು. ನಿಷಧ ಪತಿಯು ತನ್ನ ಸತಿ ಸುತರೊಡಗೂಡಿ ಮಂಗಳಮಯವಾಗಿ ಕಂಗೊಳಿಸಿದನು. ಎಲ್ಲ ದೇವತೆಗಳು ಅವನನ್ನು ಕೊಂಡಾಡಿದರು.

ಶ್ರೀಹರಿಯ ಕೃಪೆಯಿಂದ ಪರಮ ಪುಣ್ಯೋದಯ, ಸದ್ಗುಣಭರಿತ, ಸತ್ಯಸುಭಾಷಿತ, ರಣಧೀರ, ನಿತ್ಯನಿರ್ಮಲ, ವೇದಪಾರಂಗತ ನಳಮಹಾರಾಜನು ಸಿಂಹಾಸನದಲ್ಲಿ ಶೋಭಿಸುತ್ತ ರಾಜ್ಯವಾಳಿದನು.

# ಅನುಬಂಧ – ಅಭಿಪ್ರಾಯಗಳು

ಮನಮೆಚ್ಚಿದ ಕಾದಂಬರಿ ನಳ ದಮಯಂತಿ (ಡಾ. ಜಿ. ಕೃಷ್ಣಪ್ಪ) ಧಾರಾವಾಹಿ ಬಹಳ ಚೆನ್ನಾಗಿ ಬರುತ್ತಿದೆ. ಹೊಸ ಶೈಲಿ, ಭಾಷೆ ಅತ್ಯಾಕರ್ಷಕವಾಗಿದೆ.

**–ನೀಲಮ್ಮ ಕುಮಾರಪ್ಪ, ಲಿಂಗಸಗೂರ**

* * *

## ಅರ್ಥಗರ್ಭಿತ

ನಳ ಚರಿತ್ರೆಯ ಕೆಲವು ಭಾಗಗಳನ್ನು ಕಾವ್ಯರೂಪದಲ್ಲಿ ಹೈಸ್ಕೂಲಿನ ಪಠ್ಯದಲ್ಲಿ ಓದಿದ ನೆನಪು. ಈಗ ಕೃಷ್ಣಪ್ಪ ಅವರು ಬರೆದಿರುವ ಕಾದಂಬರಿ ಸರಳ ನಿರೂಪಣೆ, ಶೈಲಿ, ಮೂಲ ಕಥಾನಕಕ್ಕೆ ಭಂಗ ಬರದ ಹಾಗೆ ಸರಳ ಗದ್ಯದ ಮೂಲಕ ಹೇಳುವ ರೀತಿ ಮೆಚ್ಚುಗೆಯಾಯಿತು. ಕಥೆಗೆ ಪೂರಕವಾದ ಚಿಕ್ಕಚಿಕ್ಕ ಉಪಶೀರ್ಷಿಕೆಗಳು ಅರ್ಥಗರ್ಭಿತವಾಗಿವೆ. ಚಿತ್ರಗಳೂ ಸೊಗಸಾಗಿವೆ.

**–ಯು.ಎನ್. ಸಂಗನಾಳಮಠ, ದಾವಣಗೆರೆ**

* * *

## ಶೈಲಿ ಸೊಗಸಾಗಿದೆ

ಕನಕದಾಸರ ನಳ ದಮಯಂತಿ ಕಥೆ ಇಷ್ಟವಾಗುತ್ತಿದೆ. ಕನಕದಾಸರ ಪದ್ಯಗಳನ್ನು ಮನಸ್ಸಿಗೆ ನಾಟುವಂತೆ ತಿಳಿಸುತ್ತಿರುವ 'ಬೇಂದ್ರೆ' ಕೃಷ್ಣಪ್ಪನವರ ಶೈಲಿ ಸೊಗಸಾಗಿದೆ. ಆರೂವರೆ ದಶಕಗಳ ಹಿಂದೆ ಶಾಲೆಯಲ್ಲಿ ಓದಿದ್ದ ಈ ಕಥೆಯ ಕೆಲವು ಭಾಗಗಳನ್ನು ನೆನಪಿಸುವಂತಾಗಿದೆ.

**–ಡಾ. ಕೆ.ಕೆ. ಜಯಚಂದ್ರಗುಪ್ತ, ಹಾಸನ**

* * *

## ಬಾಲ್ಯದ ನೆನಪು

ಬಾಲ್ಯದಲ್ಲಿರುವಾಗ ಈ ಕಥೆ ಓದಿದ್ದೆ. ಈಗ ಇದನ್ನು ಮತ್ತೆ ಓದುವಾಗ ನಮ್ಮ ಗುರುಗಳು, ಸಹಪಾಠಿಗಳು, ಶಾಲೆಯ ಪರಿಸರ ಎಲ್ಲ ನೆನಪಾಯಿತು. ಕಾದಂಬರಿ ತುಂಬ ಚೆನ್ನಾಗಿ ಬರುತ್ತಿದೆ.

**–ಕೆ.ಪಿ. ದೇವೇಂದ್ರಯ್ಯ, ಸಾಸ್ವೆಹಳ್ಳಿ**

* * *

## ಉತ್ತಮ ನಿರೂಪಣೆ; ಜೀವಂತಿಕೆಯ ಪಾತ್ರಗಳು

ಸಂತಕವಿ ಕನಕದಾಸರ ನಳದಮಯಂತಿ ಧಾರಾವಾಹಿ (ಡಾ. ಜಿ. ಕೃಷ್ಣಪ್ಪ) ಚೆನ್ನಾಗಿ ಮೂಡಿಬಂದಿದೆ. ಸುಂದರವಾದ ನಿರೂಪಣೆ, ಜೀವಂತಿಕೆ ಪಡೆದ ಪಾತ್ರಗಳು. ಲಾಲಿತ್ಯದಿಂದ ಕೂಡಿದ ಚಿಕ್ಕಚಿಕ್ಕ ವಾಕ್ಯಗಳ ಜೋಡಣೆ, ಮರೆತು ಹೋದ ಕನ್ನಡ ಶಬ್ದಗಳ ಪುನರ್ಬಳಕೆಯಿಂದ ಈ ಧಾರಾವಾಹಿ ಹಳೆಗನ್ನಡದ ಕಂಪನ್ನು ಎಲ್ಲ ಕಡೆಗೆ ಪಸರಿಸಿದೆ.

**–ಡಾ. ರಶ್ಮಿ ಶ್ರೀನಿವಾಸ ಪ್ರಸನ್ನ, ಬೆಂಗಳೂರು**

* * *

## ಓದುಗರನ್ನು ಸೆಳೆದಿದೆ

'ನಳದಮಯಂತಿ' ಕಾವ್ಯದ ಗದ್ಯಾನುವಾದ ಮೂಲಕ ಡಾ. ಜಿ. ಕೃಷ್ಣಪ್ಪ ಅವರು ಕನ್ನಡದ ಅಭಿಜಾತ ಕೃತಿಗಳತ್ತ ಕನ್ನಡದ ಓದುಗರನ್ನು ಸೆಳೆಯುವ ಪ್ರಾಮಾಣಿಕ ಪ್ರಯತ್ನ ಮಾಡಿರುವುದು ನಿಜಕ್ಕೂ ಶ್ಲಾಘನೀಯ. ಕನ್ನಡ, ಹಳೆಗನ್ನಡ ಸಾಹಿತ್ಯದ ಜತೆಗೆ ದಾಸ ಸಾಹಿತ್ಯ, ವಚನ ಸಾಹಿತ್ಯಗಳು ಕೂಡ ಕಾದಂಬರಿಯಲ್ಲಿ ಮಿಳಿತಗೊಂಡಿರುವುದು ಮೆಚ್ಚುವಂಥದ್ದು. ಚಿಂತನೆಗೆ ಹಚ್ಚಿದ ಲೇಖಕರಿಗೆ ಅಭಿನಂದನೆಗಳು.

**–ಎ.ಡಿ. ನಂಜುಂಡಸ್ವಾಮಿ, ಮೈಸೂರು**

* * *

## ಕಗನ್ನಡಿಯಂತಿದೆ

ಧಾರಾವಾಹಿ ಮನೋಜ್ಞವಾಗಿ ಮೂಡಿಬಂದಿದೆ. ಕನ್ನಡ ಪ್ರಾಧ್ಯಾಪಕರು ಹಾಗೂ ವಿದ್ಯಾರ್ಥಿಗಳಿಗೆ ಕೈಗನ್ನಡಿಯಂತಿದೆ. ಕನಕದಾಸರು ಬರೆದ ಈ ಕಥಾನಕವನ್ನು ಸರಳಕನ್ನಡದಲ್ಲಿ ನೀಡಿದ 'ಸುಧಾ' ಪತ್ರಿಕೆಗೂ ಲೇಖಕರಿಗೂ ವಂದನೆಗಳು.

**–ಸತ್ಯಮಂಗಲ ಮಹದೇವ, ಬೆಂಗಳೂರು**

* * *

## ಯುವಜನಾಂಗಕ್ಕೆ ದಾರಿದೀಪ

ದಾಂಪತ್ಯ ಜೀವನದ ಮೌಲ್ಯ ಕುಸಿಯುತ್ತಿರುವ ಇಂದಿನ ಯುಗದಲ್ಲಿ 'ನಳ ದಮಯಂತಿ ಪ್ರೇಮ ಕಥಾನಕ' ಯುವ ಜನಾಂಗಕ್ಕೆ ದಾರಿದೀಪ.

**–ಡಾ. ಭತಮುರ್ಗೆ ಚಂದ್ರಪ್ಪ, ಬೀದರ್**

* * *

## ಅನುಪಮ ಚಿತ್ರಣ

ಧಾರಾವಾಹಿ ಶಾಲಾ ದಿನಗಳಲ್ಲಿ ಪಠ್ಯವಾಗಿದ್ದು ಹಲವು ಘಟನೆಗಳು ಮರುಕಳಿಸಿ ಚಾರಿತ್ರಿಕ ಲೋಕಕ್ಕೆ ಕೊಂಡೊಯ್ದಿತು. ಸಹನೆ, ತಾಳ್ಮೆ, ಸೃಜನಶೀಲತೆ, ಸರಳ ಸಂಪನ್ನತೆ ಮುಂತಾದ ಸದ್ಗುಣಗಳ ಸೂಚಕವಾಗಿ ನಳಮಹಾರಾಜನ ವ್ಯಕ್ತಿತ್ವ ರೂಪುಗೊಂಡಿರುವಂತಿದೆ. ಸಮಗ್ರತೆಯಲ್ಲಿ ಈ ಕಥಾನಕವನ್ನು ಮತ್ತೆ ಜನಮಾನಸದಲ್ಲಿ ಬಿತ್ತುವ ಕೃಷಿಯಲ್ಲಿ ಲೇಖಕರು ತಮ್ಮ ಎಂದಿನ ಸಾಫಲ್ಯತೆಯನ್ನು ಕಂಡು ಕೊಂಡಿರುವರು.

**–ಪೂರ್ಣಿಮಾ ಮೂರ್ತಿ, ಬೆಂಗಳೂರು**

* * *

## ಕಾದಂಬರಿ ಚೆನ್ನಾಗಿದೆ

ನಳ ದಮಯಂತಿ (ಡಾ. ಜಿ. ಕೃಷ್ಣಪ್ಪ) ಧಾರಾವಾಹಿ ಚೆನ್ನಾಗಿ ಬಂದಿದೆ. ಕನ್ನಡದ ಹಿರಿಮೆಯನ್ನು ಎತ್ತಿ ಹಿಡಿದ ಲೇಖಕರು ಹಾಗೂ ಸುಧಾಕ್ಕೆ ಧನ್ಯವಾದಗಳು.

**–ಶಂಕರೇಗೌಡ ತುಂಬಕೆರೆ, ಮಂಡ್ಯ –ವಿ.ಜಿ. ಗಾಯತ್ರಿ, ಬೆಂಗಳೂರು**

**–ಪ್ರದೀಪ್ ಎಸ್. ಚೆಲುವರಸನ ಕೊಪ್ಪಲು –ಎಂ. ಮೃತ್ಯುಂಜಯಪ್ಪ, ಚಿತ್ರದುರ್ಗ**

**–ಶಾಂತಾ ನಾಗರಾಜ್ ಕೆ., ಬೆಂಗಳೂರು**

* * *

## ಸರಾಗವಾಗಿ ಓದಿಸಿತು

ಕಾದಂಬರಿ ಮೊದಲಿನಿಂದ ಕೊನೆಯವರೆಗೂ ಸರಾಗವಾಗಿ ಓದಿಸಿಕೊಂಡು ಹೋಯಿತು.

**–ಜಿ. ವೆಂಕಟರಾಮಯ್ಯ, ಬೆಂಗಳೂರು**

* * *

## ಬೇಗ ಮುಗಿಯಿತೇ?

ಕಾದಂಬರಿ ಇಷ್ಟು ಬೇಗ ಮುಗಿಯಿತೇ? ಕಥೆ ತುಂಬ ಚೆನ್ನಾಗಿತ್ತು.

**–ಸಂಪತ್‌ಕುಮಾರ್, ಮೈಸೂರು**

* * *

# ಲೇಖಕರ ಕೃತಿಗಳು

೧. ಹಾಡುಹಕ್ಕಿ ಅಂಬಿಕಾತನಯದತ್ತ (೧೯೯೫), ಮೂರನೆ ಆವೃತ್ತಿ, ೨೦೧೨.

೨. ಡಿ.ಆರ್. ಬೇಂದ್ರೆ (೧೯೯೭), ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಆಂಗ್ಲ ಕೃತಿ.

೩. ನಾಕುತಂತಿ–ಒಂದು ಟಿಪ್ಪಣಿ (೨೦೦೦), ಮೂರನೆ ಆವೃತ್ತಿ–೨೦೧೨.

೪. ರಸ್ತೆ ನಿಯಮಗಳು (೨೦೦೦), ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕೃತಿ, ಐದನೆ ಆವೃತ್ತಿ–೨೦೧೫.

೫. ಹೂತsದ ಹುಣಸಿ (೨೦೦೦), (ದ.ರಾ. ಬೇಂದ್ರೆ ಕಾವ್ಯ ವಿಮರ್ಶೆ), ಎರಡನೆ ಆವೃತ್ತಿ–೨೦೧೧.

೬. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ (೨೦೦೧), (ಪಿಎಚ್.ಡಿ. ಮಹಾಪ್ರಬಂಧ), ಎರಡನೆ ಆವೃತ್ತಿ–೨೦೧೨.

೭ ಬರೆಹದಲ್ಲಿ ಬೇಂದ್ರೆಯವರ ಬದುಕು (೨೦೦೮), ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಸಿರುವ ಕೃತಿ.

೮. ಅಂತರಂಗದತ್ತ ನಯನ (೨೦೧೦).

೯. ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ (೨೦೧೨).

೧೦. ಹರಿಹರ ಮಹಾಕವಿಯ ವಚನ ಗಿರಿಜಾ ಕಲ್ಯಾಣ (೨೦೧೩).

೧೧. ತಿರುತಿರುಗಿಯು ಹೊಸತಾಗಿರಿ (೨೦೧೫).

೧೨. ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ (೨೦೧೬).

೧೩. ರಾಘವಾಂಕ ಮಹಾಕವಿಯ ವಚನ ಹರಿಶ್ಚಂದ್ರ ಚಾರಿತ್ರ (೨೦೧೬)



ಡಾ. ಜಿ. ಕೃಷ್ಣಪ್ಪ

ಕನಕದಾಸರು ಕಲಿಯೂ, ಕವಿಯೂ ಆಗಿದ್ದವರು. ದಾಸರಲ್ಲಿ ಕವಿ ಕವಿಗಳಲ್ಲಿ ದಾಸರಾಗಿ ಯಾವುದೇ ಒಂದು ಜಾತಿ, ಮತ ಪಂಥಕ್ಕೆ ಸೀಮಿತಗೊಳ್ಳದ ಇವರು ದಾಸ, ಭಕ್ತ, ದಾಸಶ್ರೇಷ್ಠ, ಸಂತ, ಮಹಾತ್ಮಾ, ಮಹಾಮಾನವತಾವಾದಿ, ಸಾಮಾಜಿಕ ಚಿಂತಕ, ವೈಚಾರಿಕತೆಯ ಹರಿಕಾರ, ದಾರ್ಶನಿಕ ಕನಕದಾಸರೆಂದು ಜನಮನದಲ್ಲಿ ನೆಲೆ ನಿಂತಿದ್ದಾರೆ.

ಹೋರಾಟದಿಂದ ಕೂಡಿದ ಅವರ ಆದರ್ಶ ಬದುಕು ಹಾಗೂ ಸಾಮಾಜಿಕ, ಧಾರ್ಮಿಕ, ವೈಚಾರಿಕ ಚಿಂತನೆಗಳಿಂದ ಕೂಡಿದ ಅವರ ಸಾಹಿತ್ಯ, ವರ್ಗ ಬೇಧಗಳಿಲ್ಲದ ಅವರ ಹೊಸ ಸಮಾಜ ಪರಿಕಲ್ಪನೆಯ ಚಿಂತನೆಗಳು ಮುಂದಿನ ತಲೆಮಾರುಗಳಿಗೆ ಅವಶ್ಯವೆಂದರಿತ ಕರ್ನಾಟಕ ಸರ್ಕಾರ 2006-07 ರಲ್ಲಿ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಿದೆ. ಆ ಮೂಲಕ ಅವರ ಜನ್ಮಭೂಮಿ ಬಾಡ ಹಾಗೂ ಕರ್ಮಭೂಮಿ ಕಾಗಿನೆಲೆಯನ್ನು ಅಂತರ್‌ರಾಷ್ಟ್ರೀಯ ಪ್ರವಾಸಿ ತಾಣಗಳನ್ನಾಗಿ ಅಭಿವೃದ್ಧಿ ಪಡಿಸುತ್ತಿದೆ.

ಪ್ರಾಧಿಕಾರ ರಚನೆಯಾಗಿ ಹತ್ತು ವರ್ಷಗಳನ್ನು ಪೂರೈಸಿದೆ. ಹತ್ತು ವರ್ಷಗಳ ಈ ದಾರಿಯಲ್ಲಿ ಪ್ರಾಧಿಕಾರ ಕ್ಷೇತ್ರಗಳ ಅಭಿವೃದ್ಧಿ, ಸಾಹಿತ್ಯ ಹಾಗೂ ಸಾಂಸ್ಕೃತಿಕವಾಗಿ ಅನೇಕ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಾ ದಶಮಾನೋತ್ಸವದ ಹೊಸ್ತಿಲಲ್ಲಿ ನಿಂತಿದೆ. ಈ ಪ್ರಸ್ತುತ ಸಂದರ್ಭದಲ್ಲಿ ಸಾಹಿತ್ಯ ಸರಣಿಯನ್ನು ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ಓದುಗರಿಗೆ ಅರ್ಪಿಸುತ್ತಿದೆ.

ಹೊರಪೇಟೆ ಮಲ್ಲೇಶಪ್ಪ
ಆಯುಕ್ತರು

ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ

ಬೆಲೆ : ರೂ. 60/-